**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಹಾಸನ ಉಪವಿಭಾಗ, ಹಾಸನ**

**ಸಂಖ್ಯೆ: ಕಾನಪ: ಎಫ್:ಎಸ್ಆರ್–11:2009, ದಿನಾಂಕ:16ನೇ ಮಾರ್ಚ್, 2009**

**ಅರ್ಜಿದಾರರು:**

1) ಶ್ರೀಮತಿ ದ್ಯಾವಮ್ಮ W/o ಲೇಟ್ ಕಾಳಯ್ಯ
2) ಶ್ರೀಮತಿ ಅಂಬಿಕಾ W/o ಲೇಟ್ ಮೋಹನ
3) ರೋಜಾ S/o ಲೇಟ್ ಮೋಹನ
4) ರಂಜಿತಾ D/o ಲೇಟ್ ಮೋಹನ
ವಾಸ: ಶಿಂಗೋಡನಹಳ್ಳಿ ಗ್ರಾಮ, ಪಾಳ್ಯ ಹೋಬಳಿ, ಆಲೂರು ತಾ:

**ಪ್ರತಿವಾದಿಗಳು:**

1) ಶ್ರೀ ರಾಜನ್ S/o ವಿ.ವಿ. ಕೃಷ್ಣಾಮೊರೆ, ಸಿದ್ದಾರ್ಥ ಕಾಂಪೌಂಡು, ಮೆಮೆಂಟ್ರಿ ಸ್ಕೂಲ್, ಉಜಿರೆ ಅಂಚೆ, ಬೆಳ್ತಂಗಡಿ.
2) ದಿ ಓರಿಯಂಟಲ್ ಇನ್‌ಶೂರೆನ್ಸ್ ಕಂ.ಲಿ., ಮಂಗಳೂರು.

**ಪ್ರಕಟಣೆ**

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಮೋಹನ್ ರವರು ಪ್ರತಿವಾದಿಯಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ:18.09.2008 ರಂದು ಸಾವನ್ನಪ್ಪಿರುತ್ತಾರೆ ಎಂದು ಕಾರ್ಮಿಕ ನಷ್ಟ ಪರಿಹಾರವನ್ನು ಕೋರಿ ಮೇಲ್ಕಂಡ ಮೃತರ ಅವಲಂಬಿತರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಯಪಡಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲಿ ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದು. ಮೇಲೆ ನಿಗದಿಪಡಿಸಿರುವ ಅವಧಿಯಲ್ಲಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನೇ ವಿಚಾರಣೆಗೆ ತೆಗೆದುಕೊಳ್ಳಲಾಗುವುದು.

**ಹೆಚ್.ಎಲ್. ಗುರುಪ್ರಸಾದ್**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ
ಆಯುಕ್ತರು, ಹಾಸನ ಉಪವಿಭಾಗ, ಹಾಸನ.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಹಾಸನ ಉಪವಿಭಾಗ, ಹಾಸನ**

**ಸಂಖ್ಯೆ: ಕಾನಪ: ಎಫ್:ಎಸ್ಆರ್–12:2009, ದಿನಾಂಕ:16ನೇ ಮಾರ್ಚ್, 2009**

**ಅರ್ಜಿದಾರರು:**

1) ಶ್ರೀ ಪುಟ್ಟೇಗೌಡ S/o ರಂಗೇಗೌಡ
2) ಶಿವಮ್ಮ W/o ಪುಟ್ಟೇಗೌಡ
ದೊಡ್ಡಗೇಣಿಗೆರೆ ಗ್ರಾಮ, ಶಾಂತಿಗ್ರಾಮ ಹೋಬಳಿ, ಹಾಸನ ತಾಲ್ಲೂಕು.

**ಪ್ರತಿವಾದಿಗಳು:**

1) ಶ್ರೀ ಹೆಚ್.ಕೆ. ಗುರುಮೂರ್ತಿ S/o ಹೆಚ್.ಎನ್. ಕೃಷ್ಣಪ್ಪ, ಗಂಧದ ಕೋಟೆ ಹಿಂಭಾಗ, ಕೆ.ಆರ್.ಪುರಂ, ಹಾಸನ.
2) ದಿ ನ್ಯೂ ಇಂಡಿಯಾ ಅಶೂರೆನ್ಸ್ ಕಂ.ಲಿ., ಹರ್ಷಮಹಲ್ ರೋಡ್, ಹಾಸನ.

**ಪ್ರಕಟಣೆ**

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ರಮೇಶ್‌ಬಾಬು ರವರು ಪ್ರತಿವಾದಿಯಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ:21.11.2008 ರಂದು ಸಾವನ್ನಪ್ಪಿರುತ್ತಾರೆ ಎಂದು ಕಾರ್ಮಿಕ ನಷ್ಟ ಪರಿಹಾರವನ್ನು ಕೋರಿ ಮೇಲ್ಕಂಡ ಮೃತರ ಅವಲಂಬಿತರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಯಪಡಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲಿ ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದು. ಮೇಲೆ ನಿಗದಿಪಡಿಸಿರುವ ಅವಧಿಯಲ್ಲಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲಿ ಈ ನ್ಯಾಯಾಲಯಲಕ್ಕೆ ಸಲ್ಲಿಸತಕ್ಕದ್ದು ಮೇಲೆ ನಿಗಧಿಪಡಿಸಿರುವ ಅವಧೀಯಲ್ಲಿ ಆಕ್ಷೇಪಣೆಗಳಾಗಲಿ ಅಥವಾ ಅರ್ಜಿಗಳಾಗಲೀ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದು ಮೇಲೆ ನಿಗಧಿಪಡಿಸಿರುವ ಅವಧಿಯಲ್ಲಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನೇ ವಿಚಾರಣೆಗೆ ತೆಗೆದುಕೊಳ್ಳಲಾಗುವುದು.

**ಹೆಚ್.ಎಲ್. ಗುರುಪ್ರಸಾದ್**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ
ಆಯುಕ್ತರು, ಹಾಸನ ಉಪವಿಭಾಗ, ಹಾಸನ.

ಪಿ.ಆರ್.259

## ಕಾರ್ಮಿಕ ಅಧಿಕಾರಿಗಳು ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ರಾಮನಗರ ಜಿಲ್ಲೆ, ರಾಮನಗರ

**ಪ್ರಕಟಣೆ ಸಂಖ್ಯೆ: ಕಾಅರಾ/ಕಾನಪ/ಮರಣ/ಸಿಆರ್–14/2009, ದಿನಾಂಕ:25ನೇ ಫೆಬ್ರವರಿ, 2009**

**ಅರ್ಜಿದಾರರು:**

1) ಕುಮಾರ ಬಿನ್ ಪುಟ್ಟಸ್ವಾಮಿ, ಕೋಡಿ ಹೊಸಹಳ್ಳಿ, ಚನ್ನಪಟ್ಟಣ ತಾಲ್ಲೂಕು.

2) ಶ್ರೀಮತಿ ಗೌರಮ್ಮ ಕೋಂ ಕುಮಾರ ಕೋಡಿ ಹೊಸಹಳ್ಳಿ, ಚನ್ನಪಟ್ಟಣ ತಾಲ್ಲೂಕು.

**ಪ್ರತಿವಾದಿಗಳು:**

1) ಶ್ರೀ ಶಿವಕುಮಾರ್ ಬಿನ್ ವೀರಣ್ಣ, ಸಾತನೂರು ಗ್ರಾಮ, ಕನಕಪುರ ತಾಲ್ಲೂಕು.

2) ಶಾಖಾ ವ್ಯವಸ್ಥಾಪಕರು, ಇಫ್ಕೋ ಟೋಕಿಯೋ ಜನರಲ್ ಇನ್ಸೂರೆನ್ಸ್ ಕಂ.ಲಿ., ನಂ.41, 2ನೇ ಮಹಡಿ, ಕ್ರಿಷ್ಣ ಕಾಂಪ್ಲೆಕ್ಸ್, ಲ್ಯಾವೆಲ್ಲೆ ರೋಡ್, ಬೆಂಗಳೂರು–01.

**ಪ್ರಕಟಣೆ**

ಈ ಮೇಲೆ ವಿಳಾಸಿಸಿರುವ ಅರ್ಜಿದಾರರು ದಿನಾಂಕ:25.02.2009ರಂದು ಈ ನ್ಯಾಯಾಲಯಕ್ಕೆ ಅರ್ಜಿಯೊಂದನ್ನು ಸಲ್ಲಿಸಿ, ಅರ್ಜಿದಾರರ ಮಗನಾದ ಲೇಟ್ ಹರೀಶ್ ಎಂಬುವವರು ಮೇಲೆ ವಿಳಾಸಿಸಿರುವ 1ನೇ ಪ್ರತಿವಾದಿಯವರ ಬಳಿ ಕೆಲಸ ನಿರ್ವಹಿಸುತ್ತಿದ್ದಾಗ ಉದ್ಯೋಗ ಸಮಯದಲ್ಲಿ ಅಪಘಾತ ಸಂಭವಿಸಿ, ಮರಣ ಹೊಂದಿರುತ್ತಾರೆಂದು ತಿಳಿಸಿ, ಮೇಲೆ ವಿಳಾಸಿಸಿರುವ ಪ್ರತಿವಾದಿಗಳ ವಿರುದ್ಧ ಕ್ರಮ ತೆಗೆದುಕೊಂಡು ತಮಗೆ ಕಾಯ್ದೆಯನ್ವಯ ಕಾರ್ಮಿಕ ನಷ್ಟ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯವನ್ನು ಪ್ರಾರ್ಥಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಪ್ರಕಟಣೆ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ "ಅವಲಂಬಿತರು" ಎಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸಗಳೊಳಗಾಗಿ ತಮ್ಮ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು, ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

**ಮೀನಾಪಾಟೀಲ**

ಪಿ.ಆರ್.258

ಕಾರ್ಮಿಕ ಅಧಿಕಾರಿಗಳು ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ರಾಮನಗರ ಜಿಲ್ಲೆ, ರಾಮನಗರ.

## ಕಾರ್ಮಿಕ ಅಧಿಕಾರಿಗಳು ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ

**ಪ್ರ.ಸಂ.ಕಾಅದಾ/ಕಾನಪ/ಸಿ.ಆರ್–39/09, ದಿನಾಂಕ:18ನೇ ಮಾರ್ಚ್, 2009**

**ಅರ್ಜಿದಾರರು:**

1) ಚಂದ್ರಮ್ಮ ಕೋಂ ಲೇ: ನಾಗಪ್ಪ @ ನಾಗೇಂದ್ರಪ್ಪ, 45 ವರ್ಷಗಳು.

2) ರೇಣುಕಮ್ಮ ಕೋಂ ನಾಗರಾಜ, 19 ವರ್ಷಗಳು.

3) ರತ್ನಮ್ಮ ಬಿ. ಎನ್. ಲೇ: ನಾಗಪ್ಪ @ ನಾಗೇಂದ್ರಪ್ಪ, 18 ವರ್ಷಗಳು.

4) ಲೋಕೇಶಿ ಬಿನ್ ಲೇ: ನಾಗಪ್ಪ @ ನಾಗೇಂದ್ರಪ್ಪ, 14 ವರ್ಷಗಳು.

ಎಲ್ಲರ ವಿಳಾಸ: ಅಗರಿಬನ್ನಿಹಟ್ಟಿ ಗ್ರಾಮ, ಚನ್ನಗಿರಿ ತಾ:ದಾವಣಗೆರೆ ಜಿಲ್ಲೆ.

**ಪ್ರತಿವಾದಿಗಳು:**

1) ಮಂಜಪ್ಪ ಬಿನ್ ಹನುಮಂತಪ್ಪ, ಟ್ರ್ಯಾಕ್ಟರ್ ಟ್ರೈಲರ್ ಚಾಲಕ ನಂ.ಕೆಎ–14/ಟಿ–8377–78 ಅಗರಿಬನ್ನಿಹಟ್ಟಿ ಗ್ರಾಮ, ಚನ್ನಗಿರಿ ತಾ:ದಾವಣಗೆರೆ ಜಿಲ್ಲೆ.

2) ಎಸ್.ಎನ್. ಭವಾನಿರಾವ್ ಬಿನ್ ಸಿದ್ಧಪ್ಪ ವಿಟ್ಟಗೊಂಡನಹಕೊಪ್ಪ ಗ್ರಾಮ, ಹಾರ್ನಹಳ್ಳಿ ಪೋಸ್ಟ್, ಶಿವಮೊಗ್ಗ ಜಿಲ್ಲೆ.

3) ವ್ಯವಸ್ಥಾಪಕರು, ದಿ ನ್ಯೂ ಇಂಡಿಯಾ ಅಶ್ಯೂರೆನ್ಸ್ ಕಂ.ಲಿ., ಶಿವಮೊಗ್ಗ.

4) ಎಂ.ಎಂ. ಚಂದ್ರಶೇಖರ್ ಬಿನ್ ಎಂ.ಎಂ. ಮಹಾಲಿಂಗಪ್ಪ ಅಗರಿಬನ್ನಿಹಟ್ಟಿ ಗ್ರಾಮ, ಚನ್ನಗಿರಿ ತಾ: ದಾವಣಗೆರೆ ಜಿಲ್ಲೆ.

**ಪ್ರಕಟಣೆ**

ಶ್ರೀ/ಶ್ರೀಮತಿ ಚಂದ್ರಮ್ಮ, ರೇಣುಕಮ್ಮ, ರತ್ನಮ್ಮ ಮತ್ತು ಲೋಕೇಶಿ ಇವರುಗಳಾದ ನಾವು ಮೃತ ನಾಗಪ್ಪ @ ನಾಗೇಂದ್ರಪ್ಪ ಇವರ ಹೆಂಡತಿ ಮತ್ತು ಮಕ್ಕಳು ಎಂದೂ ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ನಾಗಪ್ಪ @ ನಾಗೇಂದ್ರಪ್ಪರವರು ಎರಡನೇ ಪ್ರತಿವಾದಿಗಳಾದ ಎಸ್.ಎನ್. ಭವಾನಿರಾವ್ ಬಿನ್ ಸಿದ್ದಪ್ಪರಲ್ಲಿ ಕೂಲಿ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿರುವುದರಿಂದ ಸದರಿ

ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲಿ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಎಸ್.ಸಿ. ರಾಮಚಂದ್ರ**

ಪಿ.ಆರ್.261 ಕಾರ್ಮಿಕ ಅಧಿಕಾರಿ ಮತ್ತು ಆಯುಕ್ತರು, ಕಾರ್ಮಿಕ ನಷ್ಟ ಪರಿಹಾರ,
ದಾವಣಗೆರೆ ಜಿಲ್ಲೆ, ದಾವಣಗೆರೆ.

## ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಉಪಧನ ಪಾವತಿ ಕಾಯ್ದೆಯಡಿ ನಿಯಂತ್ರಣಾಧಿಕಾರಿಯವರ ನ್ಯಾಯಾಲಯ, ವಿಭಾಗ–4, ಬೆಂಗಳೂರು

### ಸಂಖ್ಯೆ: ಪಿಜಿಎ/ಎಸ್.ಆರ್–241/2006–07

**ಅರ್ಜಿದಾರರು:**
ಶ್ರೀಮತಿ ಜಯಮ್ಮ ಕೋಂ ಲೇಟ್ ಗೋಪಾಲ್, ನಂ.188, 30ನೇ ಮೈನ್, 17ನೇ ಕ್ರಾಸ್, ಜೆ.ಪಿ.ನಗರ, 6ನೇ ಹಂತ, ಬೆಂಗಳೂರು–560078

**ವಿರುದ್ಧ**

**ಪ್ರತಿವಾದಿಗಳು:**
ವಿಭಾಗೀಯ ನಿಯಂತ್ರಕರು, ಕೆ.ಎಸ್.ಆರ್.ಟಿ.ಸಿ. ಸೆಂಟ್ರಲ್ ಡಿವಿಜನ್, ಕೆ.ಹೆಚ್. ರಸ್ತೆ, ಶಾಂತಿನಗರ, ಬೆಂಗಳೂರು–560 027.

**ಪ್ರಕಟಣೆ**

ಸಾರ್ವಜನಿಕರಿಗೆ ಹಾಗೂ ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಅರ್ಜಿದಾರರು ಈ ನ್ಯಾಯಾಲಯದಲ್ಲಿ ದಿನಾಂಕ:19.12.2006 ರಂದು ಉಪಧನ ಪಾವತಿ ಕಾಯ್ದೆಯಡಿಯಲ್ಲಿ ಅರ್ಜಿಯನ್ನು ಸಲ್ಲಿಸಿ, ಅರ್ಜಿಯಲ್ಲಿ ಅವರ ಪತಿ ಲೇಟ್ ಗೋಪಾಲ್ ಇವರು ಪ್ರತಿವಾದಿ ಸಂಸ್ಥೆಯಲ್ಲಿ ತಮ್ಮ 28 ವರ್ಷಗಳ ಸೇವೆಯ ನಂತರ ದಿನಾಂಕ:31.08.1996ರಂದು ನಿವೃತ್ತಿ ಹೊಂದಿದ್ದು, ತದನಂತರ ಮರಣಹೊಂದಿದ್ದಾರೆಂದು ತಿಳಿಸಿ, ಪ್ರತಿವಾದಿಗಳಿಂದ ಕಾನೂನು ರೀತ್ಯ ಬರಬೇಕಾದ ಉಪಧನವನ್ನು ಕೊಡಿಸಿಕೊಡಬೇಕೆಂದು ಕೋರಿರುತ್ತಾರೆ.

ಸದರಿ ದಾವೆಯ ವಿಚಾರಣೆ ನಡೆಯುತ್ತಿದ್ದು, ಈ ಬಗ್ಗೆ ಆದೇಶ ಹೊರಡಿಸಬೇಕಾಗಿರುವುದರಿಂದ ಮೇಲೆ ಸೂಚಿಸಿರುವ ಅರ್ಜಿಯನ್ನು ಹೊರತುಪಡಿಸಿ (ಜೀವಂತ ಸದಸ್ಯರು) ಬೇರೆ ಯಾರಾದರೂ ಸದರಿ ಕಾರ್ಮಿಕರಿಗೆ ಸಂಬಂಧಿಸಿದ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಲು ಪ್ರಾರ್ಥಿಸುವುದಾದಲ್ಲಿ ಅಂತಹವರು ಈ ಪ್ರಕಟಣೆಯನ್ನು ರಾಜ್ಯ ಪತ್ರದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳನ್ನಾಗಲೀ ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದೆಂದು ಈ ಮೂಲಕ ಸೂಚಿಸಲಾಗಿದೆ.

ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಎ.ಹೆಚ್. ಉಮೇಶ**

ಪಿ.ಆರ್.262 ಸಹಾಯಕ ಕಾರ್ಮಿಕ ಆಯುಕ್ತರು ಮತ್ತು ನಿಯಂತ್ರಣಾಧಿಕಾರಿಗಳು,
ಉಪಧನ ಪಾವತಿ ಕಾಯ್ದೆ, ವಿಭಾಗ–4, ಬೆಂಗಳೂರು.

## ಕಂದಾಯ ಇಲಾಖೆ

### ಸೇರ್ಪಡೆ

### ನಂ.ಕಂ.ಇ.32 ವಿಮಕ 2008, ಬೆಂಗಳೂರು, ದಿನಾಂಕ:11ನೇ ಮಾರ್ಚ್, 2009

ಅಧಿಸೂಚನೆ ಸಂಖ್ಯೆ: ಕಂ.ಇ. 32 ವಿಮಕ 2008, ದಿನಾಂಕ:30.01.2009ರಲ್ಲಿನ ಕ್ರಮ ಸಂಖ್ಯೆ: 2ಬಿ ನಂತರ ಈ ಕೆಳಕಂಡಂತೆ ಸೇರ್ಪಡೆ ಮಾಡಿಕೊಂಡು ತಿದ್ದಿ ಓದಿಕೊಳ್ಳತಕ್ಕದ್ದು.

| ಕ್ರ. ಸಂ. | ಇಲಾಖಾ ವ್ಯಾಪ್ತಿಯಲ್ಲಿ ಬರುವ ಸಾರ್ವಜನಿಕ ಪ್ರಾಧಿಕಾರದ ಹೆಸರು | ಸಾರ್ವಜನಿಕ ಮಾಹಿತಿ ಅಧಿಕಾರಿ | ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ | ಮೇಲ್ಮನವಿ ಪ್ರಾಧಿಕಾರಿ |
|---|---|---|---|---|
| 2ಸಿ | ಕಂದಾಯ ಇಲಾಖೆ ಸಚಿವಾಲಯ | ಹಿರಿಯ ಲೆಕ್ಕ ಪರಿಶೋಧನಾಧಿಕಾರಿ ಆಡಿಟ್ ವರದಿ ಶಾಖೆ | ಸಹಾಯಕ ಲೆಕ್ಕ ಪರಿಶೋಧನಾಧಿಕಾರಿ ಆಡಿಟ್ ವರದಿ ಶಾಖೆ | ಸರ್ಕಾರದ ಪ್ರಧಾನ ಕಾರ್ಯದರ್ಶಿ ಕಂದಾಯ ಇಲಾಖೆ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಕೆ. ನರಸಿಂಹಲು**

ಪಿ.ಆರ್.263 ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಸಮನ್ವಯ)

## ರಾಜ್ಯ ಚುನಾವಣಾ ಆಯೋಗ, ನಡವಳಿಗಳು

**ವಿಷಯ:** ಹಾಸನ ಜಿಲ್ಲೆ ಅರಸೀಕೆರೆ ತಾಲ್ಲೂಕು ಪಂಚಾಯತಿ ಸದಸ್ಯ ಸ್ಥಾನಕ್ಕೆ 19–ಕೆಂಕೆರೆ ತಾಲ್ಲೂಕು ಪಂಚಾಯತಿ ಚುನಾವಣಾ ಕ್ಷೇತ್ರದಿಂದ ಸ್ಪರ್ಧಿಸಿದ್ದ ಶ್ರೀ ಕೆ.ಎಸ್. ಮಹಾಲಿಂಗಪ್ಪ ಬಿನ್ ಸಿದ್ಧರಾಮಯ್ಯ ಕೆ.ಟಿ. ರವರ ತಾಲ್ಲೂಕು ಪಂಚಾಯತಿ ಸದಸ್ಯತ್ವವನ್ನು ಅನರ್ಹಗೊಳಿಸಿದ ಆದೇಶವನ್ನು ಹಿಂಪಡೆಯುವ ಬಗ್ಗೆ.

**ಆದೇಶ ಸಂಖ್ಯೆ: ರಾಚುಆ:75(24): ಟಿಜೆಡ್‌ಪಿ 2007, ಬೆಂಗಳೂರು, ದಿನಾಂಕ:16ನೇ ಮಾರ್ಚ್, 2009**

ಹಾಸನ ಜಿಲ್ಲೆ ಅರಸೀಕೆರೆ ತಾಲ್ಲೂಕು ಪಂಚಾಯತಿ ಸದಸ್ಯ ಸ್ಥಾನಕ್ಕೆ 19–ಕೆಂಕೆರೆ ತಾಲ್ಲೂಕು ಪಂಚಾಯತಿ ಚುನಾವಣಾ ಕ್ಷೇತ್ರದಿಂದ ಸಾರ್ವತ್ರಿಕ ಚುನಾವಣೆ 2005ರಲ್ಲಿ ಸ್ಪರ್ಧಿಸಿದ್ದ ಶ್ರೀ ಕೆ.ಎಸ್. ಮಹಾಲಿಂಗಪ್ಪ ಬಿನ್ ಸಿದ್ಧರಾಮಯ್ಯ ಕೆ.ಟಿ. ರವರು ಕರ್ನಾಟಕ ಪಂಚಾಯತ್‌ರಾಜ್ ಅಧಿನಿಯಮ 1993ರ ಪ್ರಕರಣ 308–ಬಿ ಹಾಗೂ ಕರ್ನಾಟಕ ಪಂಚಾಯತ್ ರಾಜ್ (ಚುನಾವಣೆಗೆ ಸ್ಪರ್ಧಿಸುವ ಅಭ್ಯರ್ಥಿಗಳ ವೆಚ್ಚ ಮಿತಿ) ನಿಯಮಗಳು 2005ರ ನಿಯಮ 2 ಮತ್ತು ಕರ್ನಾಟಕ ಪಂಚಾಯತ್ ರಾಜ್ (ಜಿಲ್ಲಾ ಮತ್ತು ತಾಲ್ಲೂಕು ಪಂಚಾಯತಿ ಚುನಾವಣೆಗಳಲ್ಲಿ ಸ್ಪರ್ಧಿಸುವ ಅಭ್ಯರ್ಥಿಗಳ ವೆಚ್ಚ ಮಿತಿ) ಆದೇಶ 2005ರ ಖಂಡ 3ರ ಪ್ರಕಾರ ಚುನಾವಣಾ ವೆಚ್ಚಗಳ ಲೆಕ್ಕಪತ್ರವನ್ನು ನಿಗದಿತ ನಮೂನೆಯಲ್ಲಿ ಚುನಾವಣಾ ಫಲಿತಾಂಶ ಘೋಷಿತವಾದ 30 ದಿನಗಳೊಳಗೆ ಸಲ್ಲಿಸಿರುವುದಿಲ್ಲವೆಂದು ಹಾಸನ ಜಿಲ್ಲೆಯ ಜಿಲ್ಲಾಧಿಕಾರಿಗಳು ದಿನಾಂಕ:02.03.2006ರ ಪತ್ರದಲ್ಲಿ ವರದಿ ಮಾಡಿದ್ದರು.

ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993ರ ಪ್ರಕರಣ 308–ಸಿ ಹಾಗೂ ಕರ್ನಾಟಕ ಪಂಚಾಯತ್ ರಾಜ್ (ಜಿಲ್ಲಾ ಮತ್ತು ತಾಲ್ಲೂಕು ಪಂಚಾಯತಿ ಚುನಾವಣೆಗಳಲ್ಲಿ ಸ್ಪರ್ಧಿಸುವ ಅಭ್ಯರ್ಥಿಗಳ ವೆಚ್ಚ ಮಿತಿ) ಆದೇಶ 2005ರ ಖಂಡ 6ರ ಉಪಖಂಡ (5)ರನ್ವಯ ದಿನಾಂಕ:01.04.2006ರಂದು ನೋಟೀಸನ್ನು ಸದರಿ ಅಭ್ಯರ್ಥಿಗೆ ನೀಡಿ ಅವರನ್ನು ಏಕೆ ಅನರ್ಹಗೊಳಿಸಬಾರದು ಎಂಬುದಕ್ಕೆ ನೋಟೀಸು ತಲುಪಿದ 20 ದಿನಗಳೊಳಗಾಗಿ ರಾಜ್ಯ ಚುನಾವಣಾ ಆಯೋಗಕ್ಕೆ ಕಾರಣಗಳನ್ನು ಸಲ್ಲಿಸತಕ್ಕದ್ದೆಂದು ತಿಳಿಸಲಾಗಿತ್ತು.

ಮೇಲ್ಕಂಡ ನೋಟೀಸನ್ನು ಶ್ರೀ ಕೆ.ಎಸ್. ಮಹಾಲಿಂಗಪ್ಪ ಬಿನ್ ಸಿದ್ಧರಾಮಯ್ಯ ಕೆ.ಟಿ. ರವರಿಗೆ ಜಾರಿ ಮಾಡಿಸಿ ಜಿಲ್ಲಾಧಿಕಾರಿಗಳು ಜಾರಿಯಾದ ಪ್ರತಿಯನ್ನು ಆಯೋಗಕ್ಕೆ ಕಳುಹಿಸಿರುತ್ತಾರೆ. ಆದಾಗ್ಯೂ ಅಭ್ಯರ್ಥಿಯ ಆಯೋಗಕ್ಕೆ ಯಾವುದೇ ಉತ್ತರವನ್ನು ನೀಡಿರಲಿಲ್ಲ. ಜಿಲ್ಲಾಧಿಕಾರಿಗಳ ದಿನಾಂಕ:25.11.2006ರ ವರದಿಯಲ್ಲಿಯೂ ಸಹ ಸದರಿ ಅಭ್ಯರ್ಥಿಯು ಚುನಾವಣಾ ವೆಚ್ಚದ ಲೆಕ್ಕ ವಿವರಗಳನ್ನು ಸಲ್ಲಿಸಿರುವುದಿಲ್ಲವೆಂದು ತಿಳಿಸಿರುತ್ತಾರೆ.

ಆದ್ದರಿಂದ ಸದರಿ ಶ್ರೀ ಕೆ.ಎಸ್. ಮಹಾಲಿಂಗಪ್ಪ ಬಿನ್ ಸಿದ್ಧರಾಮಯ್ಯ ಕೆ.ಟಿ. ಇವರು ಚುನಾವಣಾ ವೆಚ್ಚದ ಲೆಕ್ಕಪತ್ರಗಳನ್ನು ನಿಗದಿತ ಅವಧಿಯಲ್ಲಿ ಸಲ್ಲಿಸದೇ ಇರುವುದಕ್ಕೆ ಹಾಗೂ ಈ ರೀತಿ ಲೆಕ್ಕಪತ್ರಗಳನ್ನು ಸಲ್ಲಿಸಲು ವಿಫಲರಾಗಿರುವುದಕ್ಕೆ ಯಾವುದೇ ಕಾರಣ ಅಥವಾ ಸಮರ್ಥನೆಗಳನ್ನು ನೀಡದಿರುವುದರಿಂದಾಗಿ ರಾಜ್ಯ ಚುನಾವಣಾ ಆಯೋಗವು ಆದೇಶ ನಂ.ರಾಚುಆ:75(24) ಟಿ.ಜೆಡ್.ಪಿ.2007 ದಿನಾಂಕ:25.04.2007 ರನ್ವಯ ಸದರಿ ಅಧಿನಿಯಮದ ಪ್ರಕರಣ 308–ಸಿ ಇದರಡಿ ಅವರನ್ನು ಆರು ವರ್ಷಗಳ ಅವಧಿಗೆ ಅನರ್ಹರೆಂದು ಘೋಷಿಸಿತು.

ಪ್ರಸ್ತುತ ಸ್ವತಃ ತಹಶೀಲ್ದಾರ್ ಅರಸೀಕೆರೆ ತಾಲ್ಲೂಕು ಇವರು ದಿನಾಂಕ:05.02.2009ರ ಪತ್ರದಲ್ಲಿ ಅಭ್ಯರ್ಥಿಗಳ ಲೆಕ್ಕಪತ್ರಗಳ ವರದಿ ಸಲ್ಲಿಸುವಾಗ ಕಣ್ಣತಪ್ಪಿನಿಂದ ಸದರಿ ಅಭ್ಯರ್ಥಿಯು ಲೆಕ್ಕಪತ್ರಗಳ ವರದಿಯನ್ನು ಸಲ್ಲಿಸಿಲ್ಲವೆಂದು ತಿಳಿಸಲಾಗಿತ್ತು ಆದರೆ ಇವರು ದಿನಾಂಕ:25.11.2006ರಲ್ಲಿ ಲೆಕ್ಕ ಪತ್ರಗಳನ್ನು ಕಛೇರಿಗೆ ಸಲ್ಲಿಸಿರುತ್ತಾರೆಂದು ವರದಿಯಲ್ಲಿ ತಿಳಿಸಿರುತ್ತಾರೆ ಮತ್ತು ಅವರು ಸಲ್ಲಿಸಿರುವ ಚುನಾವಣಾ ವೆಚ್ಚದ ಲೆಕ್ಕ ಪತ್ರಗಳು ಮಿತಿಯೊಳಗಿದ್ದು ಒಪ್ಪಬಹುದಾಗಿರುತ್ತದೆಂದು ವರದಿ ಮಾಡಿರುತ್ತಾರೆ. ಚುನಾವಣಾ ವೆಚ್ಚ ವಿವರ ಕುರಿತು ಲೆಕ್ಕ ಪತ್ರಗಳನ್ನು ಸಲ್ಲಿಸಿರುವುದರಿಂದ ಅಭ್ಯರ್ಥಿಯನ್ನು ಸದರಿ ಅಧಿನಿಯಮದ ಪ್ರಕರಣ 308–ಸಿ ಯಡಿ ಅನರ್ಹಗೊಳಿಸಲು ಬರಲಾರದು ಆದರೆ ಈ ಹಿಂದೆ ಹಾಸನ ಜಿಲ್ಲಾಧಿಕಾರಿಗಳು ಸಲ್ಲಿಸಿದ್ದ ವರದಿಯನ್ನು ಪರಿಗಣಿಸಿ ಅಭ್ಯರ್ಥಿಯನ್ನು ಅನರ್ಹಗೊಳಿಸುವ ಪ್ರಶ್ನೆ ಉದ್ಭವಿಸಿತ್ತು. ಆದ್ದರಿಂದ ಈ ಆದೇಶವು ಪ್ರಾರಂಭದಿಂದಲೇ ಶೂನ್ಯವಾದ ಆದೇಶವಾಗಿರುತ್ತದೆ.

ಮೇಲೆ ವಿವರಿಸಿದ ಕಾರಣಗಳಿಂದ ಶ್ರೀ ಕೆ.ಎಸ್. ಮಹಾಲಿಂಗಪ್ಪ ಬಿನ್ ಸಿದ್ಧರಾಮಯ್ಯ ಕೆ.ಟಿ. ರವರ ಆದೇಶ ಸಂಖ್ಯೆ: ರಾಚುಆ:75(24): ಟಿ.ಜೆಡ್.ಪಿ.2007 ದಿನಾಂಕ:25.04.2007 ರಲ್ಲಿ ಅನರ್ಹಗೊಳಿಸಿರುವ ಆದೇಶವನ್ನು ಈ ಮೂಲಕ ರದ್ದುಗೊಳಿಸಲಾಗಿದೆ.

**ಮ.ರಾ. ಹೆಗಡೆ**

ಪಿ.ಆರ್.264

ಆಯುಕ್ತರು,

ರಾಜ್ಯ ಚುನಾವಣಾ ಆಯೋಗ.

## ಕಾರ್ಯದರ್ಶಿ ಹಾಗೂ ನಿಯಂತ್ರಕರು (ಪ್ರ) ಇಲಾಖಾ ಪರೀಕ್ಷೆಗಳು
## ಕರ್ನಾಟಕ ಲೋಕಸೇವಾ ಆಯೋಗ

**ವಿಷಯ:** ಕರ್ನಾಟಕ ರಾಜ್ಯ ಶಿಕ್ಷಕರ ಕಲ್ಯಾಣನಿಧಿ, ಶಿಕ್ಷಕರ ಸದನ ಕಛೇರಿ, ಕಾವೇರಿಭವನದ ಎದುರು, ಕೆಂಪೇಗೌಡ ರಸ್ತೆ, ಬೆಂಗಳೂರು–560002, ಸೇವೆ ಸಲ್ಲಿಸುತ್ತಿರುವ (1) ಶ್ರೀ ಮುನಿತಿಮ್ಮಯ್ಯ, ಪ್ರ.ದ.ಸ. (2) ಶ್ರೀಮತಿ ಗೀತಾ ಎನ್. ಗಣಕ ಕೇಂದ್ರ ಮೇಲ್ವಿಚಾರಕರು (3) ಶ್ರೀ ಲಕ್ಷ್ಮೀಶ ಎಸ್. ಕಂಪ್ಯೂಟರ್ ಪ್ರೋಗ್ರಾಮರ್, ಇವರ ಇಲಾಖಾ ಪರೀಕ್ಷೆಯ ಮೂಲ ಪ್ರಮಾಣಪತ್ರಗಳನ್ನು ಅವುಗಳನ್ನು ಆಯೋಗವು ರದ್ದುಪಡಿಸುವ ಬಗ್ಗೆ.

**ಓದಲಾಗಿದೆ:**

**ಉಲ್ಲೇಖ:** 1) ಶ್ರೀ ಎಸ್.ವಿ. ಪ್ರಕಾಶ್, ವಕೀಲರು (ಶ್ರೀ ಟಿ.ಶಂಕರ್ ಇವರ ವಕೀಲರು) ಇವರ ಪತ್ರ ದಿನಾಂಕ:17.10.2007.

2) ಶ್ರೀ ಎಸ್.ವಿ. ಪ್ರಕಾಶ್ ಇವರಿಗೆ ಆಯೋಗದ ಪತ್ರ ದಿನಾಂಕ:16.11.2007.

3) ಶ್ರೀ ಎಸ್.ವಿ. ಪ್ರಕಾಶ್, ವಕೀಲರು ಇವರ ಪತ್ರ ದಿನಾಂಕ:19.01.2008.

4) ಶ್ರೀ ಮುನಿತಿಮ್ಮಯ್ಯ, ಪ್ರ.ದ.ಸ. 2) ಶ್ರೀಮತಿ ಗೀತಾ ಎನ್. ಗಣಕಕೇಂದ್ರ ಮೇಲ್ವಿಚಾರಕರು ಮತ್ತು 3) ಶ್ರೀ ಲಕ್ಷ್ಮೀಶ ಎಸ್. ಇವರಿಗೆ ಜಾರಿ ಮಾಡಿರುವ ದಿನಾಂಕ:10.03.2008ರ ಷೋಕಾಸ್ ನೋಟೀಸ್.

5) ಶ್ರೀ ಮುನಿತಿಮ್ಮಯ್ಯ, ಪ್ರ.ದ.ಸ. ಇವರ ಸಮಜಾಯಿಷಿ ದಿನಾಂಕ:22.03.2008 ಮತ್ತು ಶ್ರೀಮತಿ ಗೀತಾ ಎನ್. ಗಣಕಕೇಂದ್ರ ಮೇಲ್ವಿಚಾರಕರು, ಇವರ ಸಮಜಾಯಿಷಿ ದಿನಾಂಕ:20.03.2008 ಮತ್ತು ಶ್ರೀ ಲಕ್ಷ್ಮೀಶ ಎಸ್. ಕಂಪ್ಯೂಟರ್ ಪ್ರೋಗ್ರಾಮರ್, ಇವರಿಂದ ಷೋಕಾಸ್ ನೋಟೀಸ್‌ಗೆ ಸಮಜಾಯಿಷಿಯು ಬಂದಿರುವುದಿಲ್ಲ.

**ಪ್ರಸ್ತಾವನೆ:**

ರಾಷ್ಟ್ರೀಯ ಶಿಕ್ಷಕರ ಕಲ್ಯಾಣ ಪ್ರತಿಷ್ಠಾನ, ಕರ್ನಾಟಕ ರಾಜ್ಯ ವಿದ್ಯಾರ್ಥಿಗಳ ಕ್ಷೇಮಾಭಿವೃದ್ಧಿ ನಿಧಿ, ಕರ್ನಾಟಕ ರಾಜ್ಯ ಶಿಕ್ಷಕರ ಕಲ್ಯಾಣ ನಿಧಿ ಸಂಸ್ಥೆ, ಶಿಕ್ಷಕರ ಸದನ, ಕೆಂಪೇಗೌಡ ರಸ್ತೆ, ಬೆಂಗಳೂರು, ಇಲ್ಲಿ ಸೇವೆ ಸಲ್ಲಿಸುತ್ತಿರುವ 1) ಶ್ರೀ ಮುನಿತಿಮ್ಮಯ್ಯ, ಪ್ರ.ದ.ಸ, 2) ಶ್ರೀಮತಿ ಗೀತಾ ಎನ್. ಗಣಕಕೇಂದ್ರ ಮೇಲ್ವಿಚಾರಕರು, 3) ಶ್ರೀ ಲಕ್ಷ್ಮೀಶ ಎಸ್. ಕಂಪ್ಯೂಟರ್ ಪ್ರೋಗ್ರಾಮರ್, ಸರ್ಕಾರಿ ನೌಕರರಲ್ಲದ ಕಾರಣ ಕರ್ನಾಟಕ ಲೋಕಸೇವಾ ಆಯೋಗವು ನಡೆಸುತ್ತಿರುವ ಇಲಾಖಾ ಪರೀಕ್ಷೆಗಳಿಗೆ (ಸೇವಾ ಪರೀಕ್ಷೆಗಳು) ಅರ್ಜಿ ಸಲ್ಲಿಸಿ ತೇರ್ಗಡೆಯಾಗಿರುವ ಬಗ್ಗೆ ಶ್ರೀ ಟಿ. ಶಂಕರ್, ಪ್ರ.ದ.ಸ. (ಕ.ರಾ.ಶಿ.ಕ.ನಿ) ಇವರ ಪರವಾಗಿ ಉಲ್ಲೇಖ (1) ಶ್ರೀ ಎಸ್.ವಿ. ಪ್ರಕಾಶ್ ವಕೀಲರು ಇವರು ದಿನಾಂಕ:17.10.2007ರಂದು ಆಯೋಗಕ್ಕೆ ಪತ್ರವನ್ನು ಬರೆದಿದ್ದು, ಸದರಿ ಪತ್ರಕ್ಕೆ ಉಲ್ಲೇಖ (2)ರ ಆಯೋಗದ ಪತ್ರ ದಿನಾಂಕ:16.11.2007ರಂದು ವಕೀಲರಿಗೆ ಪತ್ರವನ್ನು ಬರೆಯಲಾಗಿದ್ದು ಅದಕ್ಕೆ ಸವಿಸ್ತಾರವಾಗಿ ಉತ್ತರವನ್ನು ಹಾಗೂ ದಾಖಲೆಗಳನ್ನು ಉಲ್ಲೇಖ (3) ದಿನಾಂಕ:19.01.2008 ಪತ್ರದಲ್ಲಿ ಶ್ರೀ ಎಸ್.ವಿ. ಪ್ರಕಾಶ್ ವಕೀಲರಿಗೆ ಪೂರೈಸಲಾಗಿದ್ದು, ಸದರಿ ಪತ್ರದಲ್ಲಿರುವ ಅಂಶಗಳನ್ವಯ ಪರಿಶೀಲಿಸಲಾಗಿ ಕರ್ನಾಟಕ ರಾಜ್ಯ ಶಿಕ್ಷಕರ ಕಲ್ಯಾಣ ನಿಧಿ, ಕಛೇರಿಯು ಒಂದು ಸ್ವಯಂ ಸ್ವಾಯತ್ತತೆ ಹೊಂದಿದ ಸಂಸ್ಥೆಯಾಗಿರುತ್ತದೆ. ಈ ಸಂಸ್ಥೆಯಲ್ಲಿ ಸೇವೆ ಸಲ್ಲಿಸುತ್ತಿರುವ 1) ಶ್ರೀ ಮುನಿತಿಮ್ಮಯ್ಯ, ಪ್ರ.ದ.ಸ, 2) ಶ್ರೀಮತಿ ಗೀತಾ ಎನ್. ಗಣಕಕೇಂದ್ರ ಮೇಲ್ವಿಚಾರಕರು, 3) ಶ್ರೀ ಲಕ್ಷ್ಮೀಶ ಎಸ್. ಕಂಪ್ಯೂಟರ್ ಪ್ರೋಗ್ರಾಮರ್, ಈ ಅಭ್ಯರ್ಥಿಗಳು ಕೆ.ಪಿ.ಎಸ್.ಸಿ. ಕಛೇರಿಯು ನಡೆಸುತ್ತಿರುವ ಇಲಾಖಾ ಪರೀಕ್ಷೆಗಳಿಗೆ ಅರ್ಜಿಗಳನ್ನು ಸಲ್ಲಿಸಿದ್ದು ವಿವಿಧ ವಿಷಯಗಳಲ್ಲಿ ತೇರ್ಗಡೆಯಾಗಿ ಮೂಲಪ್ರಮಾಣ ಪತ್ರಗಳನ್ನು ಪಡೆದುಕೊಂಡು ಶ್ರೀ ಮುನಿತಿಮ್ಮಯ್ಯ, ಪ್ರ.ದ.ಸ. ಇವರು ಕರ್ನಾಟಕ ರಾಜ್ಯ ಶಿಕ್ಷಕರ ಕಲ್ಯಾಣ ನಿಧಿ ಸಂಸ್ಥೆಯಲ್ಲಿ ಪದೋನ್ನತಿಯನ್ನು ಪಡೆದಿರುತ್ತಾರೆಂದು ಪತ್ರದಲ್ಲಿ ತಿಳಿಸಿರುವುದರಿಂದ ಕಛೇರಿಯಲ್ಲಿರುವ ದಾಖಲೆಗಳನ್ನು ಪರಿಶೀಲಿಸಲಾಗಿ ಸದರಿಯವರು ಇಲಾಖಾ ಪರೀಕ್ಷೆಯಲ್ಲಿ ತೇರ್ಗಡೆಯಾಗಿ ಮೂಲಪ್ರಮಾಣ ಪತ್ರಗಳನ್ನು ಪಡೆದಿರುವುದು ಕಂಡುಬಂದಿದ್ದು ಉಲ್ಲೇಖಿತ ಪತ್ರ (4)ರ ಪ್ರಕಾರ ಕರ್ನಾಟಕ ರಾಜ್ಯ ಶಿಕ್ಷಕರ ಕಲ್ಯಾಣ ನಿಧಿ ಸಂಸ್ಥೆಯಲ್ಲಿ ಕೆಲಸ ನಿರ್ವಹಿಸುತ್ತಿರುವ 1) ಶ್ರೀ ಮುನಿತಿಮ್ಮಯ್ಯ, ಪ್ರ.ದ.ಸ, 2) ಶ್ರೀಮತಿ ಗೀತಾ ಎನ್. ಗಣಕಕೇಂದ್ರ ಮೇಲ್ವಿಚಾರಕರು, 3) ಶ್ರೀ ಲಕ್ಷ್ಮೀಶ ಎಸ್. ಕಂಪ್ಯೂಟರ್ ಪ್ರೋಗ್ರಾಮರ್, ಇವರಿಗೆ ಕಛೇರಿಯಿಂದ ಷೋಕಾಸ್ ನೋಟೀಸ್‌ನ್ನು ಉಲ್ಲೇಖಿತ ಪತ್ರ (4)ರ ದಿನಾಂಕ:10.03.2008ರಂದು ಕಛೇರಿಯಿಂದ ಜಾರಿ ಮಾಡಲಾಗಿದ್ದು, ಸದರಿ ಷೋಕಾಸ್ ನೋಟೀಸಿಗೆ ಉತ್ತರವಾಗಿ ಉಲ್ಲೇಖ (5) ಶ್ರೀ ಮುನಿತಿಮ್ಮಯ್ಯ ಪ್ರ.ದ.ಸ., ಸಮಜಾಯಿಷಿಯನ್ನು ದಿನಾಂಕ:22.03.2008 ಮತ್ತು ಶ್ರೀಮತಿ ಗೀತಾ ಎನ್. ಇವರು ದಿನಾಂಕ:20.03.2008ರಂದು ಕಛೇರಿಗೆ ಸಮಜಾಯಿಷಿಯನ್ನು ನೀಡಿರುತ್ತಾರೆ. ಶ್ರೀ ಲಕ್ಷ್ಮೀಶ ಎಸ್. ಇವರಿಂದ ಇದುವರೆವಿಗೂ ಉತ್ತರವು ಬಂದಿರುವುದಿಲ್ಲ. ಈ ಮೂರು ಅಭ್ಯರ್ಥಿಗಳಲ್ಲಿ ಶ್ರೀ ಮುನಿತಿಮ್ಮಯ್ಯ, ಶ್ರೀಮತಿ ಗೀತಾ ಎನ್., ಇವರು ನೀಡಿರುವ ಸಮಜಾಯಿಷಿಯು ಅಸಮರ್ಪಕವಾಗಿರುತ್ತದೆಂದು ಕಂಡುಬಂದಿರುವುದರಿಂದ ಮತ್ತು ಶ್ರೀ ಲಕ್ಷ್ಮೀಶ್ ಎಸ್. ಉತ್ತರವನ್ನು ನೀಡದ ಕಾರಣ ಈ ಕೆಳಕಂಡ ಆದೇಶವನ್ನು ಮಾಡಿದೆ.

**ಆದೇಶ ಸಂಖ್ಯೆ: ಇಪ(2)76/08–09/ಪಿಎಸ್‌ಸಿ, ಬೆಂಗಳೂರು ದಿನಾಂಕ:15ನೇ ಮೇ, 2008**

1965ರ ಕರ್ನಾಟಕ ಲೋಕಸೇವಾ ಆಯೋಗ (ಸೇವಾ ಪರೀಕ್ಷೆಗಳ ನಡೆಸುವಿಕೆ) ನಿಯಮಗಳ ಪ್ರಕಾರ ಸರ್ಕಾರಿ ನೌಕರರು ಮಾತ್ರ ಇಲಾಖಾ ಪರೀಕ್ಷೆಗಳನ್ನು ತೆಗೆದುಕೊಳ್ಳಲು ಅರ್ಹರಿರುತ್ತಾರೆ. ಕರ್ನಾಟಕ ರಾಜ್ಯ ಶಿಕ್ಷಕರ ಕಲ್ಯಾಣ ನಿಧಿ, ಶಿಕ್ಷಕರ ಸದನ ಬೆಂಗಳೂರು–1 ಈ ಸಂಸ್ಥೆಯು ಒಂದು ಸ್ವಯಂ ಸ್ವಾಯತ್ತತೆ ಹೊಂದಿದ ಸಂಸ್ಥೆಯಾಗಿರುತ್ತದೆ. ಈ ಸಂಸ್ಥೆಯಲ್ಲಿ ಸೇವೆ ಸಲ್ಲಿಸುತ್ತಿರುವ ಅಭ್ಯರ್ಥಿಗಳು ಲೋಕಸೇವಾ ಆಯೋಗ ನಡೆಸುತ್ತಿರುವ ಇಲಾಖಾ ಪರೀಕ್ಷೆಗಳಿಗೆ ವಿವಿಧ ವಿಷಯಗಳಲ್ಲಿ ಅರ್ಜಿಗಳನ್ನು ಸಲ್ಲಿಸಿ ಇಲಾಖಾ ಪರೀಕ್ಷೆಯನ್ನು ಬರೆದು ತೇರ್ಗಡೆಯಾಗಿ ಮೂಲ ಪ್ರಮಾಣಪತ್ರವನ್ನು ಪಡೆದಿರುವಂತಹ ಮಾಹಿತಿಯು ಈ ಕೆಳಕಂಡಂತಿದೆ.

| ಕ್ರ. ಸಂ. | ಹೆಸರು | ಅಧಿವೇಶನ | ನೋಂದಣಿ ಸಂಖ್ಯೆ | ವಿಷಯ | ಪ್ರಮಾಣ ಪತ್ರ ಸಂಖ್ಯೆ |
|---|---|---|---|---|---|
| 1. | ಶ್ರೀಮತಿ ಗೀತಾ ಎಸ್. ನಂ.1029, 4ನೇ ಮೈನ್, 'ಡಿ' ಬ್ಲಾಕ್, 2ನೇ ಹಂತ, ರಾಜಾಜಿನಗರ, ಬೆಂಗಳೂರು–560010. | 1996/ಪ್ರಥಮ | 22766 | ಅಕೌಂಟ್ಸ್ ಹೈಯರ್ | ಸಿಸಿ ನಂ.283735 |
| 2. | ಶ್ರೀ ಮುನಿತಿಮ್ಮಯ್ಯ, ಕೇರಾಫ್ ಎಂ ಮುನಿಸ್ವಾಮಿ, ನಂ.220/8, ಬಜಾರ್ ಸ್ಟ್ರೀಟ್ ಕ್ರಾಸ್, ನೀಲಸಂದ್ರ, ಬೆಂಗಳೂರು–47. | 1988/ಪ್ರಥಮ<br><br>1988/ದ್ವಿತೀಯ | 176<br>11413 | ಅಕೌಂಟ್ಸ್ ಲೋಯರ್<br>ಅಕೌಂಟ್ಸ್ ಹೈಯರ್<br>ಜನರಲ್ ಲಾ ಭಾಗ–2 | ಸಿಸಿನಂ.107517<br>ಸಿಸಿನಂ.04337<br>ಸಿಸಿನಂ.05944 |
| 3. | ಶ್ರೀ ಲಕ್ಷ್ಮೀಶ ಎಸ್. ಕಂಪ್ಯೂಟರ್ ಪ್ರೋಗ್ರಾಮರ್, ಟೀಚರ್ಸ್ ಬೆನಿಫಿಟ್ ಫಂಡ್, ಕೆ.ಆರ್. ಸರ್ಕಲ್, ಬೆಂಗಳೂರು–560001 | 1992/ಪ್ರಥಮ | 22877 | ಅಕೌಂಟ್ಸ್ ಹೈಯರ್<br>ಜನರಲ್ ಲಾ ಭಾಗ–1<br>ಕನ್ನಡ ಭಾಷಾ ಪರೀಕ್ಷೆ | ಸಿಸಿನಂ.110963<br>ಸಿಸಿನಂ.111501<br>ಸಿಸಿನಂ.108667 |

ಕರ್ನಾಟಕ ರಾಜ್ಯ ಶಿಕ್ಷಕರ ಕಲ್ಯಾಣ ನಿಧಿಯಲ್ಲಿ ಸೇವೆ ಸಲ್ಲಿಸುತ್ತಿರುವ ಈ ಮೇಲಿನ ಅಭ್ಯರ್ಥಿಗಳು ಸರ್ಕಾರಿ ನೌಕರರಲ್ಲದ ಕಾರಣ ಇಲಾಖಾ ಪರೀಕ್ಷೆಯನ್ನು ತೆಗೆದುಕೊಳ್ಳಲು ಅರ್ಹರಿರುವುದಿಲ್ಲವಾದ್ದರಿಂದ ಸದರಿ ಅಭ್ಯರ್ಥಿಗಳು ತೇರ್ಗಡೆಯಾಗಿರುವ ವಿಷಯಗಳ ವರ್ಷ ಮತ್ತು ಅಧಿವೇಶನದಿಂದ ಜಾರಿಗೆ ಬರುವಂತೆ ಮೇಲ್ಕಂಡ ವಿಷಯಗಳ ಇಲಾಖಾ ಪರೀಕ್ಷೆಯ ಮೂಲಪ್ರಮಾಣ ಪತ್ರಗಳನ್ನು ರದ್ದುಪಡಿಸಲಾಗಿದೆ.

ಕಾರ್ಯದರ್ಶಿ ಹಾಗೂ ನಿಯಂತ್ರಕರು (ಪ್ರ),
ಇಲಾಖಾ ಪರೀಕ್ಷೆಗಳು,
ಕರ್ನಾಟಕ ಲೋಕಸೇವಾ ಆಯೋಗ.

ಪಿ.ಆರ್.541

**ಸಹಕಾರ ಸಂಘಗಳ ಉಪನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು ಇವರ ನಡವಳಿಕೆಗಳು**
**ನಂ.ಡಿಆರ್‌ಟಿ/ಡಿಎಲ್‌ಎಸ್/47/2008–09, ದಿನಾಂಕ:12ನೇ ಮಾರ್ಚ್, 2009**

**ವಿಷಯ:** ಸ್ಥಗಿತಗೊಂಡಿರುವ ಹಾಲು ಉತ್ಪಾದಕರ ಸಹಕಾರ ಸಂಘ ನಿಯಮಿತ, ತಿಮ್ಮನಾಯಕನಹಳ್ಳಿ, ಕೊರಟಗೆರೆ ತಾಲ್ಲೂಕು ಈ ಸಂಘವನ್ನು ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ:**1) ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ/69/ಸಿಎಲ್‌ಎಂ/2001, ದಿನಾಂಕ:21.11.2001.
2) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ ಉಪವಿಭಾಗ, ಮಧುಗಿರಿ ಇವರ ಪತ್ರ ಸಂಖ್ಯೆ:ಸನಿ–33/ಎಂಕೆಟಿ/ಸ್ಥಗಿತ/78/2008–09, ದಿನಾಂಕ:05.11.2008.
3) ಈ ಕಛೇರಿಯ ಸಮಸಂಖ್ಯೆ ಕಾರಣ ಕೇಳಿ ನೋಟೀಸು ದಿನಾಂಕ:15.01.2009.
4) ಸಹಕಾರ ಅಭಿವೃದ್ಧಿ ಅಧಿಕಾರಿ, ಕೊರಟಗೆರೆ ಇವರ ಪತ್ರ ಸಂಖ್ಯೆ: ಸಅಕೊ/ಎಂಪಿಸಿಎಸ್/ಸಮಾಪನೆ/126/2008–09, ದಿನಾಂಕ:31.01.2009.

ಪ್ರಸ್ತಾವನೆ:

ಸ್ಥಗಿತಗೊಂಡಿರುವ ಹಾಲು ಉತ್ಪಾದಕರ ಸಹಕಾರ ಸಂಘ ನಿಯಮಿತ, ತಿಮ್ಮನಾಯಕನಹಳ್ಳಿ, ಕೊರಟಗೆರೆ ತಾಲ್ಲೂಕು, ಈ ಸಂಘದ ಕಾರ್ಯ ಚಟುವಟಿಕೆಗಳು ಸ್ಥಗಿತಗೊಂಡಿದ್ದ ಕಾರಣ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ ಉಪವಿಭಾಗ, ಮಧುಗಿರಿ ಇವರು ಉಲ್ಲೇಖ(2)ರ ಪತ್ರದೊಂದಿಗೆ ಪ್ರಸ್ತಾವನೆ ಸಲ್ಲಿಸಿ ಸಂಘವನ್ನು ಸಮಾಪನೆಗೊಳಿಸುವಂತೆ ಕೋರಿರುತ್ತಾರೆ.

ಸಂಘವನ್ನು ಸಮಾಪನೆಗೊಳಿಸುವ ಸಂಬಂಧ ಸಂಘದ ಆಡಳಿತ ಮಂಡಳಿ ಸದಸ್ಯರಿಗೆ ಹಾಗೂ ಕಾರ್ಯದರ್ಶಿಗೆ ನಿಮ್ಮ ಸಂಘವನ್ನು ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 72(2)(ಬಿ) ರೀತ್ಯಾ ಏಕೆ ಸಮಾಪನೆಗೊಳಿಸಬಾರದು? ಹಾಗೂ ಈ ನೋಟೀಸು ತಲುಪಿದ 7 ದಿನಗಳೊಳಗಾಗಿ ತಮ್ಮ ಆಕ್ಷೇಪಣೆಗಳೇನಾದರೂ ಇದ್ದಲ್ಲಿ ಈ ಕಛೇರಿಗೆ ಸಲ್ಲಿಸಲು ಉಲ್ಲೇಖ (3)ರಲ್ಲಿ ಕಾರಣ ಕೇಳಿ ನೋಟೀಸು ದಿನಾಂಕ:15.01.2009ನ್ನು ಸಹಕಾರ ಅಭಿವೃದ್ಧಿ ಅಧಿಕಾರಿ, ಕೊರಟಗೆರೆ ಇವರಿಗೆ ಕಳುಹಿಸಿ ಆಡಳಿತ ಮಂಡಳಿ ಸದಸ್ಯರಿಗೆ ಜಾರಿ ಮಾಡಿಸಿ ಸ್ವೀಕೃತಿ ಸಲ್ಲಿಸಲು ತಿಳಿಸಲಾಗಿತ್ತು. ಸದರಿ ನೋಟೀಸನ್ನು ಆಡಳಿತ ಮಂಡಳಿ ಸದಸ್ಯರಿಗೆ ಜಾರಿ ಮಾಡಿಸಿ ಉಲ್ಲೇಖ (4)ರ ಪತ್ರದೊಂದಿಗೆ ಸ್ವೀಕೃತಿ ಸಲ್ಲಿಸಿರುತ್ತಾರೆ.

ಸಂಘದ ಕಾರ್ಯವ್ಯಾಪ್ತಿಯಲ್ಲಿರುವ ಆಡಳಿತ ಮಂಡಳಿ ಸದಸ್ಯರುಗಳಿಗೆ ಹಾಗೂ ಸಂಘದ ಕಾರ್ಯದರ್ಶಿಗೆ ಕಾರಣ ಕೇಳುವ ನೋಟೀಸು ಜಾರಿಯಾಗಿದ್ದು ಇದುವರೆವಿಗೂ ಸಂಘವನ್ನು ಸಮಾಪನೆಗೊಳಿಸುವ ಕ್ರಮದ ಬಗ್ಗೆ ಯಾರೂ ಸಹಾ ಯಾವುದೇ ಆಕ್ಷೇಪಣೆ ಸಲ್ಲಿಸಿರುವುದಿಲ್ಲ. ಸಂಘದ ಆಡಳಿತ ಮಂಡಳಿ ಸದಸ್ಯರು ಹಾಗೂ ಕಾರ್ಯದರ್ಶಿ ಸಂಘವನ್ನು ಸಮಾಪನೆಗೊಳಿಸುವುದಕ್ಕೆ ಯಾವುದೇ ಆಕ್ಷೇಪಣೆ ಇಲ್ಲವೆಂದು ಭಾವಿಸಲಾಗಿದೆ.

ಮೇಲಿನ ಎಲ್ಲಾ ಅಂಶಗಳನ್ನು ಪರಿಗಣಿಸಿ ಸಂಘವನ್ನು ಸಮಾಪನೆಗೊಳಿಸಲು ಈ ಕೆಳಕಂಡ ಆದೇಶ ಹೊರಡಿಸಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ನಮೂದಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 72(2)(ಬಿ) ಅನ್ವಯ ಹಾಗೂ ಉಲ್ಲೇಖ (1)ರ ಸರ್ಕಾರದ ಅಧಿಸೂಚನೆಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಡಿ.ಪಾಂಡುರಂಗಪ್ಪ, ಸಹಕಾರ ಸಂಘಗಳ ಉಪನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು ಆದ ನಾನು ಸ್ಥಗಿತಗೊಂಡಿರುವ ಹಾಲು ಉತ್ಪಾದಕರ ಸಹಕಾರ ಸಂಘ ನಿ., ತಿಮ್ಮನಾಯಕನಹಳ್ಳಿ, ಕೊರಟಗೆರೆ ತಾಲ್ಲೂಕು, ಈ ಸಂಘವನ್ನು ಸಮಾಪನೆಗೊಳಿಸಿ ಸಹಕಾರ ಅಭಿವೃದ್ಧಿ ಅಧಿಕಾರಿ, ಕೊರಟಗೆರೆ ಇವರನ್ನು ಸಮಾಪನಾಧಿಕಾರಿಯಾಗಿ ನೇಮಿಸಿರುತ್ತೇನೆ. ಸಮಾಪನಾಧಿಕಾರಿಗಳು ಕೂಡಲೇ ಸಂಘದ ಪ್ರಭಾರ ಪಡೆದು ಸಂಘದ ಆಸ್ತಿಜವಾಬ್ದಾರಿ ಅನ್ವಯ ಆದ್ಯತಾ ಪಟ್ಟಿ ತಯಾರಿಸಿ ಈ ಕಛೇರಿಯಿಂದ ಆದ್ಯತಾ ಪಟ್ಟಿಗೆ ಅನುಮೋದನೆ ಪಡೆದುಕೊಂಡು ಆಸ್ತಿ ಜವಾಬ್ದಾರಿಗಳನ್ನು ಆದ್ಯತೆಯ ಮೇರೆಗೆ ಶೀಘ್ರವಾಗಿ ವಿಲೇವಾರಿ ಮಾಡಿ ಸಂಘದ ನೋಂದಣಿ ರದ್ಧತಿಗೆ ಪ್ರಸ್ತಾವನೆ ಸಲ್ಲಿಸಲು ಆದೇಶಿಸಿದೆ.

ಈ ಆದೇಶವನ್ನು ಕೂಡಲೇ ಜಾರಿಗೆ ಬರುವುದು. ಆದೇಶವನ್ನು ನನ್ನ ಹಸ್ತಾಕ್ಷರ ಹಾಗೂ ಈ ಕಛೇರಿಯ ಮೊಹರಿನೊಂದಿಗೆ ದಿನಾಂಕ:12.03.2009ರಂದು ಹೊರಡಿಸಿದೆ.

ಸಹಕಾರ ಸಂಘಗಳ ಉಪನಿಬಂಧಕರು,
ತುಮಕೂರು ಜಿಲ್ಲೆ, ತುಮಕೂರು.

ಪಿ.ಆರ್.254

**ಕಾರ್ಮಿಕ ಅಧಿಕಾರಿ ವ ಕಾರ್ಮಿಕ ನಷ್ಠ ಪರಿಹಾರ ಆಯುಕ್ತರ ನ್ಯಾಯಾಲಯ, ಉಪವಿಭಾಗ–1, ವಿಜಾಪುರ ಜಿಲ್ಲೆ, ವಿಜಾಪುರ**

**ಪ್ರಕರಣ ಸಂಖ್ಯೆ: ಡಬ್ಲ್ಯೂಸಿಎ/ಎಸ್‌ಆರ್–61/09, ದಿನಾಂಕ:3ನೇ ಮಾರ್ಚ್, 2009**

| **ಅರ್ಜಿದಾರರು:** | | **ಪ್ರತಿವಾದಿಗಳು:** |
|---|---|---|
| 1) ಮದೀನಾ ಗಂ: ಸಲೀಮ ತಾಂಬೋಳಿ,<br>ವಯಸ್ಸು:21, ಉದ್ಯೋಗ:ಮನೆಕೆಲಸ.<br>2) ಗಫೂರ ಚಂದುಲಾಲ ತಾಂಬೋಳಿ,<br>ವಯಸ್ಸು:50, ಉದ್ಯೋಗ: ಕೂಲಿ.<br>3) ಅಮೀನಾ ಗಫೂರ ತಾಂಬೋಳಿ,<br>ವಯಸ್ಸು:45, ಉದ್ಯೋಗ–ಮನೆಕೆಲಸ<br>ಸಾ:ಎಲ್ಲರೂ ಪರಾಪ್‌ರೋಜಾ, ಬಿಜಾಪುರ. | **ವಿರುದ್ಧ** | 1) ಕಾಶಿಬಾಯಿ ಭಾಸ್ಕರ ಸರದೆ<br>ವಯಸ್ಸು:ಪ್ರಾಪ್ತ, ಉದ್ಯೋಗ ಗಾಡಿ ಮಾಲೀಕರು.<br>ಸಾ: ಚೀಕಲಠಾಣ, ತಾ:ಕರಮಳಾ.<br>2) ಡಿವಿಜನಲ್ ಮ್ಯಾನೇಜರ್ ನ್ಯೂ ಇಂಡಿಯಾ ಇನ್ಸೂರನ್ಸ್ ಕಂ.ಲಿ., ಗುಲ್ಬರ್ಗಾ. |

**ಪ್ರಕಟಣೆ**

ಮೇಲ್ಕಾಣಿಸಿದ ಅರ್ಜಿದಾರರು ಈ ನ್ಯಾಯಾಲಯದಲ್ಲಿ ಅರ್ಜಿಯೊಂದನ್ನು ಸಲ್ಲಿಸಿ, ಶ್ರೀ ಸಲೀಮ ಗಫೂರ ತಾಂಬೋಳಿ ಇವರು ಪ್ರತಿವಾದಿಗಳ ಬಳಿ ಕೆಲಸ ನಿರ್ವಹಿಸುವಾಗ ಮತ್ತು ಕೆಲಸದ ಪರಿಣಾಮದಿಂದಾಗಿ ದಿನಾಂಕ:17.02.2009 ರಂದು ಅಪಘಾತಕ್ಕೀಡಾಗಿ ಮೃತನಾಗಿರುತ್ತಾನೆಂದು ಅಲ್ಲದೇ ತಾವು ಮೃತರ ಅವಲಂಬಿತರಾಗಿರುವುದರಿಂದ ಕಾಯ್ದೆಯನ್ವಯ ತಮಗೆ ಬರಬೇಕಾದ ಪರಿಹಾರದ ಹಣವನ್ನು ಪ್ರತಿವಾದಿಗಳಿಂದ ಕೊಡಿಸಿಕೊಡಬೇಕೆಂದು ವಿನಂತಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ, ಹಾಗೂ ಅರ್ಜಿದಾರರಲ್ಲದೇ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ ತಮ್ಮ ಪರ ಆಕ್ಷೇಪಣೆಯಾಗಲೀ ಅಥವಾ ಅರ್ಜಿಯಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸಬೇಕು. ಹಾಗೂ ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಮತ್ತು ಅರ್ಜಿಗಳು ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಅರ್ಜಿಗಳನ್ನು ಮತ್ತು ಆಕ್ಷೇಪಣೆಗಳನ್ನು ಸ್ವೀಕರಿಸಲಾಗುವುದಿಲ್ಲ.

ಎಂ.ಡಿ. ಇಂಡಿ
ಕಾರ್ಮಿಕ ಅಧಿಕಾರಿ ವ ಕಾರ್ಮಿಕ ನಷ್ಟ ಪರಿಹಾರ
ಆಯುಕ್ತರು, ಉಪವಿಭಾಗ–1, ವಿಜಾಪುರ.

ಪಿ.ಆರ್.255

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್ ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರ ನ್ಯಾಯಾಲಯದಲ್ಲಿ**

**ನಂ.ಎಸ್‌ಡಿಕೆ/95ಡಿಟಿಸಿಆರ್/2007–08, ದಿನಾಂಕ:26ನೇ ಫೆಬ್ರವರಿ, 2009**

**ಉಪಸ್ಥಿತರು:** ನೂರ್ ಮಹಮ್ಮದ್ ಹುಸೇನ್ ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಫಿರ್ಯಾದುದಾರರು:**
ಅಬಕಾರಿ ಉಪ ನಿರೀಕ್ಷಕರು (2), ಜಾರಿ ಮತ್ತು ತನಿಖೆ, ಬೆಳ್ತಂಗಡಿ

**ಆರೋಪಿ**
ಪತ್ತೆಯಾಗಿರುವುದಿಲ್ಲ

**ವಾಹನದ ಮಾಲೀಕರು**
ಶ್ರೀ ಭವಾನಿ ಶಂಕರ್ ರೈ, ಬಿನ್ ಕೃಷ್ಣರೈ, ಶಿವಾಜಿನಗರ, ಗುರುವಾಯಿನಕೆರೆ, ಬೆಳ್ತಂಗಡಿ ತಾಲ್ಲೂಕು.

**ಪ್ರಕರಣದ ಮುಖ್ಯಾಂಶಗಳು:**

ಅಬಕಾರಿ ಉಪ ನಿರೀಕ್ಷಕರು (2), ಜಾರಿ ಮತ್ತು ತನಿಖೆ, ಬೆಳ್ತಂಗಡಿ ಇವರಿಗೆ ದೊರೆತ ಖಚಿತ ವರ್ತಮಾನದ ಮೇರೆಗೆ ಅವರ ಸಿಬ್ಬಂದಿಯವರೊಂದಿಗೆ ದಿನಾಂಕ:27.09.2007 ರಂದು ಬೆಳಿಗ್ಗೆ 10–10 ಗಂಟೆ ಸಮಯದಲ್ಲಿ ಬೆಳ್ತಂಗಡಿ ತಾಲ್ಲೂಕು ಕುವೆಟ್ಟು ಗ್ರಾಮದ ಗುರುವಾಯಿನಕೆರೆ ಉಪ್ಪಿನಂಗಡಿ ರಸ್ತೆಯ ಶಿವಾಜಿನಗರದಲ್ಲಿ ವಾಹನ ತಪಾಸಣೆ ಮಾಡುತ್ತಿದ್ದ ಸಂದರ್ಭದಲ್ಲಿ ಗುರುವಾಯಿನಕೆರೆಯಿಂದ ಉಪ್ಪಿನಂಗಡಿ ಕಡೆಗೆ ವೇಗವಾಗಿ ಬರುತ್ತಿದ್ದ ಅಂಬಾಸಿಡರ್ ಕಾರನ್ನು ನಿಲ್ಲಿಸಲು ಸೂಚನೆ ನೀಡಿದಾಗ ಚಾಲಕನು ಸಮವಸ್ತ್ರದಲ್ಲಿದ್ದ ಅಧಿಕಾರಿಗಳನ್ನು ಕಂಡು ಗಲಿಬಿಲಿಯಿಂದ ಕಾರನ್ನು ಚಲಾಯಿಸಿ ಸುಮಾರು 1 ಕಿ.ಲೋ.ಮೀಟರು ದೂರದ ಶಿವಾಜಿ ನಗರದ ಕೊಂಟು ಪಲ್ಕೆಯ ಮೋರಿ ಎಂಬಲ್ಲಿ ವಾಹನವನ್ನು ನಿಲ್ಲಿಸಿ ಓಡಿ ಪರಾರಿಯಾಗಿದ್ದನು. ಆತನನ್ನು ಹಿಡಿಯಲು ಪ್ರಯತ್ನಿಸಿದ್ದರೂ ಫಲಕಾರಿಯಾಗಲಿಲ್ಲ. ರಸ್ತೆಯಲ್ಲಿ ಹೋಗುತ್ತಿದ್ದ ಕೆಲವು ವ್ಯಕ್ತಿಗಳಿಗೆ ವಿಷಯ ತಿಳಿಸಿ ಪಂಚರಾಗಿ ಸಹಕರಿಸಲು ಕೇಳಿಕೊಂಡ ಮೇರೆಗೆ ಯಾರೂ ಒಪ್ಪದ ಕಾರಣ ಅಬಕಾರಿ ಸಿಬ್ಬಂದಿಯವರನ್ನೇ ಪಂಚರನ್ನಾಗಿರಿಸಿಕೊಂಡು, ಅಂಬಾಸಿಡರ್ ಕಾರನ್ನು ಶೋಧನೆ ಮಾಡಲು ನ್ಯಾಯಾಲಯದಿಂದ ಸರ್ಚ್ ವಾರೆಂಟ್ ಸಮಯಾವಕಾಶವಿಲ್ಲದ ಕಾರಣ ಕರ್ನಾಟಕ ಅಬಕಾರಿ ಕಾಯಿದೆ ಕಲಂ 54ರ ಪ್ರಕಾರ ಸರ್ಚ್ ಮೆಮೊವನ್ನು ತಯಾರಿಸಿ ಸದರಿ ಕಾರನ್ನು ಕೂಲಂಕುಷವಾಗಿ ಪರಿಶೀಲಿಸಿದಾಗ ಅದು ಬಿಳಿ ಬಣ್ಣದ ಅಂಬಾಸಿಡರ್ ಕಾರು ಆಗಿದ್ದು, ಇದರ ನೊಂದಣಿ ಸಂಖ್ಯೆ: ಕೆಎ–19–ಎಂ–0352 ಆಗಿದ್ದು ಚಾಲಕನ ಹಿಂದಿನ ಸೀಟಿನಲ್ಲಿ ನಾಲ್ಕು ರಟ್ಟಿನ ಪೆಟ್ಟಿಗೆಗಳು ಹಾಗೂ ಡಿಕ್ಕಿಯಲ್ಲಿ ಎಂಟು ರಟ್ಟಿನ ಪೆಟ್ಟಿಗೆಗಳು ಈ ಕೆಳಗಿನಂತಿರುತ್ತದೆ.

| ಕ್ರ.ಸಂ. | ಮದ್ಯದ ವಿವರ | 180 ಎಂಎಲ್‌ನ ಸೀಸೆಗಳು | ಲೀಟರು |
|---|---|---|---|
| 1. | ಮೈಸೂರು ಲ್ಯಾನ್ಸರ್ ವಿಸ್ಕಿ | 192 | 34.560 |
| 2. | ಓಲ್ಡ್ ಮಾಂಕ್ ರಂ | 384 | 69.120 |
| | ಒಟ್ಟು | | 103.680 |

ಸದರಿ ಮದ್ಯ ಹಾಗೂ ರಮ್‌ಗೆ ಯಾವುದೇ ಭದ್ರತಾ ಚೀಟಿ ಇರುವುದಿಲ್ಲ. ಸದರಿ ಮದ್ಯ ಹಾಗೂ ರಮ್‌ನಿಂದ ರಾಸಾಯನಿಕ ಪರೀಕ್ಷೆಗಾಗಿ ತಲಾ 30 ಸೀಸೆಗಳನ್ನು ಮಾದರಿಗಾಗಿ ತೆಗೆಯಲಾಗಿದ್ದು, ಎಲ್ಲಾ ಸೀಸೆಗಳ ಬಾಯಿಗೆ ಬಟ್ಟೆದಾರ ಸುತ್ತಿ, ಅರಗು ಸೀಲು ಹಾಗೂ ಕಛೇರಿಯ ಸೀಲಿನಿಂದ ಸೀಲು ಮಾಡಲಾಯಿತು. ಮತ್ತು ಗುರುತಿನ ಚೀಟಿಗಳನ್ನು ಮಾದರಿ ಸೀಸೆಗಳಿಗೂ ಹಾಗೂ ಸೊತ್ತುಗಳಿಗೂ ಅಂಟಿಸಲಾಯಿತು. ಇದು ಅಕ್ರಮ ನಕಲಿ ಮದ್ಯವಾಗಿದ್ದು, ಇದನ್ನು ಸಾಗಾಟ ಮಾಡಲು ಅಂಬಾಸಿಡರ್ ಕಾರು ಸಂಖ್ಯೆ: ಕೆಎ–19–ಎಂ–0352 ರಲ್ಲಿ ಸಾಗಾಟ ಮಾಡಿರುವುದು ಕರ್ನಾಟಕ ಅಬಕಾರಿ ಕಾಯಿದೆ 1965ರ

ಕಲಂ 11, 14 ಮತ್ತು 15ರ ಪ್ರಕಾರ ಅಪರಾಧ ಹಾಗೂ 32, 34, 38ಎ ರಂತೆ ಶಿಕ್ಷಾರ್ಹವಾಗಿರುವುದರಿಂದ, ಓಡಿಹೋದ ಆರೋಪಿಯ ವಿರುದ್ಧ ತಕ್ಷೀರು ಸಂಖ್ಯೆ:6/2007–08, ದಿನಾಂಕ:27.09.2007ರಂತೆ ಪ್ರಕರಣವನ್ನು ನೋಂದಾಯಿಸಿ ಪ್ರಥಮ ಮಾಹಿತಿ ವರದಿ, ಮಹಜರು ಪ್ರತಿ ಹಾಗೂ ಸೊತ್ತುಗಳ ಪಟ್ಟಿಯನ್ನು ಮಾನ್ಯ ನ್ಯಾಯಾಲಯಕ್ಕೆ ಸಲ್ಲಿಸಿ, ಮುಂದಿನ ತನಿಖೆಯನ್ನು ಕೈಗೊಂಡಿರುತ್ತಾರೆ.

ಸದರಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಮದ್ಯ ಹಾಗೂ ರಮ್‌ನಿಂದ ತೆಗೆದ ಮಾದರಿ ಸೀಸೆಗಳನ್ನು ರಾಸಾಯನಿಕ ಪರೀಕ್ಷೆಗೆ ಒಳಪಡಿಸಿದ್ದು, ಸದರಿ ಮಾದರಿಗಳನ್ನು ವಿಶ್ಲೇಷಿಸಿದ ಕರ್ನಾಟಕ ಸರ್ಕಾರದ ಸಹಾಯಕ ರಾಸಾಯನಿಕ ತಜ್ಞರು, ಮಂಗಳೂರುರವರ ಪತ್ರ ಸಂಖ್ಯೆ: ಇ–342–60/25–10–07 ದಿನಾಂಕ:12.11.2007ರ ವರದಿಯಲ್ಲಿ ಮದ್ಯದ ಮದ್ಯಸಾರ ಪ್ರಮಾಣ 25% ಮತ್ತು ರಮ್‌ನ ಮದ್ಯಸಾರ ಅಂಶ 32% ಇರುವುದಾಗಿ ದೃಢೀಕರಣ ಪತ್ರ ನೀಡಿರುತ್ತಾರೆ. ಪ್ರಕರಣದ ತನಿಖಾಧಿಕಾರಿಯವರು ಜಪ್ತುಪಡಿಸಿಕೊಂಡ ಮದ್ಯ ಹಾಗೂ ರಮ್‌ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವಂತೆ ದಿನಾಂಕ:20.02.2008ರಂದು ನೀಡಿದ ತನಿಖಾ ವರದಿಯನ್ನು ಆಧರಿಸಿ, ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರು ಈ ಪ್ರಾಧಿಕಾರದ ಆದೇಶ ಸಂಖ್ಯೆ: ಎಸ್‌ಡಿಕೆ/95/ಡಿಟಿಸಿಆರ್/2007–08, ದಿನಾಂಕ:21.07.2008ರ ಪ್ರಕಾರ ಪ್ರಕರಣದಲ್ಲಿ ಜಪ್ತುಪಡಿಸಿಕೊಂಡಿರುವ ಸೊತ್ತುಗಳ ಪೈಕಿ ವಾಹನದ ಮುಟ್ಟುಗೋಲು ನಡವಳಿಯನ್ನು ಕಾಯ್ದಿರಿಸಿ, 103.680 ಲೀ ಮದ್ಯವನ್ನು (ಮಾದರಿಗಳನ್ನು ಹೊರತುಪಡಿಸಿ) ಕರ್ನಾಟಕ ಅಬಕಾರಿ ಕಾಯಿದೆ ಕಲಂ 43ಸಿ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಅಬಕಾರಿ ಉಪ ಅಧೀಕ್ಷಕರು, ಬಂಟ್ವಾಳ ಉಪವಿಭಾಗ, ಬಂಟ್ವಾಳ ಇವರ ಸಮಕ್ಷಮ ಮಹಜರು ಜರುಗಿಸಿ ನಾಶಪಡಿಸಲು ಆದೇಶಿಸಲಾಗಿರುತ್ತದೆ.

ಸದರಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಅಂಬಾಸಿಡರ್ ಕಾರು ಸಂಖ್ಯೆ: ಕೆಎ–19–ಎಂ–0352ರ ಆರ್.ಸಿ. ಮಾಲೀಕರ ಹೆಸರು ಮತ್ತು ವಿಳಾಸವನ್ನು ನೀಡುವ ಬಗ್ಗೆ ಸಂಬಂಧಪಟ್ಟ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರಿಗೆ ಈ ಪ್ರಾಧಿಕಾರದಿಂದ ದಿನಾಂಕ:05.10.2007ರಂದು ಪತ್ರ ಬರೆಯಲಾಗಿದ್ದು, ಸದರಿ ಪತ್ರದ ಅನುಗುಣವಾಗಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಈ ಪ್ರಾಧಿಕಾರಕ್ಕೆ ಬಿ ಎಕ್ಸ್‌ಟ್ರಾಕ್ಟ್ ವರದಿಯನ್ನು ಸಲ್ಲಿಸಿರುತ್ತಾರೆ. ಬಿ ಎಕ್ಸ್‌ಟ್ರಾಕ್ಟ್ ವರದಿಯ ಪ್ರಕಾರ ವಾಹನ ಅಂಬಾಸಿಡರ್ ಕಾರು ಸಂಖ್ಯೆ: ಕೆಎ–19–ಎಂ–0352 ಆಗಿದ್ದು, ಇದರ ಚಾಸೀಸ್ ನಂ.111–611579 ಮತ್ತು ಇಂಜಿನ್ ನಂ.6EDO43740 ಆಗಿರುತ್ತದೆ. ಇದು 1990ರ ಮಾಡೆಲ್ ಆಗಿದ್ದು, ಇದರ ಆರ್.ಸಿ. ಮಾಲೀಕ ಶ್ರೀ ಭವಾನಿ ಶಂಕರ ರೈ ಬಿನ್ ಕೃಷ್ಣ ರೈ, ಶಿವಾಜಿನಗರ, ಗುರುವಾಯಿನಕೆರೆ ಅಂಚೆ, ಬೆಳ್ತಂಗಡಿ ಎಂದು ದೃಢೀಕರಣ ಪತ್ರ ನೀಡಿರುತ್ತಾರೆ.

ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರುರವರು ನೀಡಿರುವ ಬಿ ಎಕ್ಸ್‌ಟ್ರಾಕ್ಟ್ ವರದಿಯ ಪ್ರಕಾರ ವಾಹನದ ನೊಂದಣಿ ಮಾಲೀಕರಾದ ಶ್ರೀ ಭವಾನಿ ಶಂಕರ ರೈ, ಇವರಿಗೆ ಈ ಪ್ರಾಧಿಕಾರದಿಂದ ಕರ್ನಾಟಕ ಅಬಕಾರಿ ಕಾಯಿದೆ 1965ರ ಸೆಕ್ಷನ್ಸ್ 43ಬಿ ಪ್ರಕಾರ ಕಾರಣ ಕೇಳಿ ನೋಟಿಸನ್ನು 26.08.2008ರಂದು ನೊಂದಾಣಿ ಅಂಚೆ ಮೂಲಕ ಹಾಗೂ ತನಿಖಾಧಿಕಾರಿಯವರ ಮುಖಾಂತರ ನೀಡಲಾಗಿದ್ದು, ನೊಂದಾಣಿ ಅಂಚೆ ಮೂಲಕ ನೀಡಿದ ನೋಟೀಸು ಜಾರಿಯಾಗದೇ ಈ ಪ್ರಾಧಿಕಾರಕ್ಕೆ ಹಿಂದೆ ಬಂದಿರುತ್ತದೆ. ಅಬಕಾರಿ ಉಪ ನಿರೀಕ್ಷಕರು (2) ಬೆಳ್ತಂಗಡಿ ವಲಯ ಇವರು ವಾಹನದ ನೊಂದಾಣಿ ಮಾಲೀಕರಾದ ಶ್ರೀ ಭವಾನಿ ಶಂಕರ್ ರೈ ಇವರಿಗೆ ಖುದ್ದಾಗಿ ದಿನಾಂಕ:04.09.2008ರಂದು ಜಾರಿ ಮಾಡಿ, ಜಾರಿ ಮಾಡಿದ ಸ್ವೀಕೃತಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

ಪ್ರಕರಣವು ದಾಖಲಾಗಿ ಸುಮಾರು 1 ವರ್ಷ 5 ತಿಂಗಳು ಕಳೆದಿದ್ದರೂ, ಈ ಪ್ರಾಧಿಕಾರದ ಮುಂದೆ ವಾಹನದ ಮಾಲೀಕರಾಗಲೀ ಅಥವಾ ಅವರ ಪರ ವಕೀಲರಾಗಲೀ ಮತ್ತು ಆರೋಪಿಗಳಾಗಲೀ ಈ ಪ್ರಾಧಿಕಾರದ ಮುಂದೆ ಹಾಜರಾಗಿ ವಾಹನ ಬಿಡುಗಡೆಗೆ ಯಾವುದೇ ಅರ್ಜಿಯನ್ನು ಸಲ್ಲಿಸಿರುವುದಿಲ್ಲ. ವಾಹನ ಮಾಲೀಕರಿಗೆ ಕಾರಣ ಕೇಳಿ ನೋಟಿಸು ಜಾರಿಯಾಗಿದ್ದರೂ ಈ ಪ್ರಾಧಿಕಾರದ ಮುಂದೆ ಇದುವರೆಗೂ ಹಾಜರಾಗಿರುವುದಿಲ್ಲ.

1965ನೇ ಕರ್ನಾಟಕ ಅಬಕಾರಿ ಕಾಯ್ದೆ ಅಡಿಯಲ್ಲಿ ಪ್ರಕರಣವನ್ನು ದಾಖಲು ಮಾಡುವಾಗ ಆರೋಪಿಯು ಪತ್ತೆಯಾಗದಿದ್ದಲ್ಲಿ, ಅಥವಾ ಪತ್ತೆಯಾಗುವ ಸಾಧ್ಯತೆ ಇಲ್ಲದಿದ್ದಲ್ಲಿ ಪ್ರಕರಣವನ್ನು ಪತ್ತೆಹಚ್ಚಿದ ಒಂದು ತಿಂಗಳಲ್ಲಿ ಯಾವುದೇ ವ್ಯಕ್ತಿಯು ಪ್ರಾಧಿಕಾರದ ಮುಂದೆ ಹಾಜರಾಗಿ ಅಪರಾಧದಲ್ಲಿ ಜಪ್ತಾಗಿರುವ ಸೊತ್ತುಗಳು ತಮ್ಮದೆಂದು ಅವುಗಳ ಕಾನೂನು ಬದ್ಧವಾಗಿದೆಯೆಂದು ಸಾಕ್ಷ್ಯಾಧಾರಗಳೊಂದಿಗೆ ಸಾಭೀತು ಪಡಿಸದೇ ಇದ್ದಲ್ಲಿ, ಸದರಿ ಸೊತ್ತುಗಳು, ಅಬಕಾರಿ ಕಾಯ್ದೆ ಕಲಂ 43ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿರುವ ಸೊತ್ತುಗಳಾಗಿದ್ದಲ್ಲಿ, ಅಂತಹ ಸೊತ್ತುಗಳನ್ನು ಕಲಂ 43ಸಿ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿರುತ್ತದೆ.

ಪ್ರಾಧಿಕಾರದಲ್ಲಿ ಲಭ್ಯವಿರುವ ದಾಖಲಾತಿಗಳ ಪ್ರಕಾರ ದಿನಾಂಕ:27.09.2007ರಂದು ಅಂಬಾಸಿಡರ್ ಕಾರು ಸಂಖ್ಯೆ: ಕೆಎ–19–ಎಂ–0352ರಲ್ಲಿ ಅಕ್ರಮವಾಗಿ ಯಾವುದೇ ರಹದಾರಿ ಪತ್ರವಿಲ್ಲದೇ ಆರೋಪಿಗಳು 103.680 ಲೀ ಮದ್ಯವನ್ನು ಹೊಂದಿ ಸಾಗಾಟ ಮಾಡುತ್ತಿದ್ದು, ತಪಾಸಣೆ ಕರ್ತವ್ಯದಲ್ಲಿರುವ ಅಬಕಾರಿ ಅಧಿಕಾರಿಗಳು ಗಮನಿಸಿ ಆರೋಪಿಗಳು

ತಲೆಮರೆಸಿಕೊಂಡಿರುವುದನ್ನು ಅಬಕಾರಿ ಉಪ ನಿರೀಕ್ಷಕರು (2) ಜಾರಿ ಮತ್ತು ತನಿಖೆ, ಬೆಳ್ತಂಗಡಿ ಇವರು ಪತ್ತೆಹಚ್ಚಿ ಯಾವುದೇ ಭದ್ರತಾ ಚೀಟಿಯಿಲ್ಲದೇ ನಕಲಿ ಮದ್ಯವನ್ನು ಅಕ್ರಮವಾಗಿ ಸಾಗಾಣಿಕೆಗೆ ಬಳಸಲಾದ ವಾಹನವನ್ನು ಸ್ಥಳ ಮಹಜರು, ಪಂಚನಾಮೆಯ ಮುಖೇನಾ ಸ್ವಾಧೀನಪಡಿಸಿಕೊಂಡು ಅಬಕಾರಿ ಉಪ ನಿರೀಕ್ಷಕರು (2), ಜಾರಿ ಮತ್ತು ತನಿಖೆ, ಬೆಳ್ತಂಗಡಿ ಇವರ ತಕ್ಷೀರು ಸಂಖ್ಯೆ: 6/2007-08 ದಿನಾಂಕ:27.09.2007ರ ಪ್ರಕಾರ ಪ್ರಕರಣ ದಾಖಲಿಸಿಕೊಂಡು, ವಾಹನದಲ್ಲಿ ಜಪ್ತು ಮಾಡಲ್ಪಟ್ಟಿರುವ ವಸ್ತು ರಾಸಾಯನಿಕ ತಜ್ಞರ ವರದಿಯಂತೆ ಮದ್ಯ ಹಾಗೂ ರಮ್ ಎಂಬುವುದಾಗಿ ದೃಢಪಡಿಸಿರುವುದರಿಂದ, ಸದರಿ ವಾಹನವನ್ನು ಕರ್ನಾಟಕ ಅಬಕಾರಿ ಕಾನೂನಿನ ಉಲ್ಲಂಘನೆಗಾಗಿ ಬಳಸಿರುವುದು ಸ್ಪಷ್ಟವಾಗಿ ಸಾಬೀತಾಗಿರುವುದಾಗಿ ಈ ಪ್ರಾಧಿಕಾರವು ವಾಹನದ ಮುಟ್ಟುಗೋಲು ನಡವಳಿ ಬಗ್ಗೆ ತೀರ್ಮಾನ ತೆಗೆದುಕೊಳ್ಳಬೇಕಾಗಿರುತ್ತದೆ.

ಅಬಕಾರಿ ಉಪ ನಿರೀಕ್ಷಕರು (2), ಜಾರಿ ಮತ್ತು ತನಿಖೆ, ಬೆಳ್ತಂಗಡಿ ಇವರು ಪ್ರಕರಣದ ತನಿಖಾ ವರದಿಯನ್ನು ದಿನಾಂಕ:16.06.2008ರಂತೆ ಒಪ್ಪಿಸಿ, ಸದರಿ ವಾಹನ ಹಾಗೂ ಜಪ್ತುಪಡಿಸಿದ ಮದ್ಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ವರದಿಸಿದ್ದು, ಸದರಿ ವರದಿಯನ್ನು ಅಬಕಾರಿ ನಿರೀಕ್ಷಕರು, ಬೆಳ್ತಂಗಡಿ ವಲಯ ಇವರು ಅವಲೋಕಿಸಿ ದಿನಾಂಕ:20.06.2008ರಂತೆ ಅವರ ಮೇಲಾಧಿಕಾರಿ ಹಾಗೂ ಅಬಕಾರಿ ಉಪ ಅಧೀಕ್ಷಕರು, ಬಂಟ್ವಾಳ ಉಪವಿಭಾಗ ಇವರ ಮುಖಾಂತರ ಈ ಪ್ರಾಧಿಕಾರಕ್ಕೆ ದಿನಾಂಕ:20.06.2008ರಂತೆ ಪ್ರಸ್ತಾವನೆಯನ್ನು ಅಂಗೀಕರಿಸಲು ವರದಿ ಒಪ್ಪಿಸಿರುತ್ತಾರೆ.

ಈ ಮೇಲಿನ ಎಲ್ಲಾ ಅಂಶಗಳನ್ನು ಪರಿಶೀಲಿಸಿದಾಗ ಅಬಕಾರಿ ಉಪ ನಿರೀಕ್ಷಕರು (2), ಜಾರಿ ಮತ್ತು ತನಿಖೆ, ಬೆಳ್ತಂಗಡಿ ಇವರು ವಶಪಡಿಸಿಕೊಂಡ ಅಂಬಾಸಿಡರ್ ಕಾರು ಸಂಖ್ಯೆ: ಕೆಎ-19-ಎಂ-0352ನ್ನು ವಶಪಡಿಸಿಕೊಂಡು ಸುಮಾರು ಒಂದು ವರ್ಷ ಐದು ತಿಂಗಳಿಗಿಂತ ಹೆಚ್ಚು ಸಮಯ ಕಳೆದಿದ್ದು, ಈ ಪ್ರಾಧಿಕಾರದ ಮುಂದೆ ವಾಹನ ಬಿಡುಗಡೆಗಾಗಿ ಮತ್ತು ವಾಹನವು ಅಕ್ರಮ ಮದ್ಯ ಸಾಗಾಟದಲ್ಲಿ ತೊಡಗಿಲ್ಲವೆಂದು ಸಾಭೀತುಪಡಿಸಲು ಯಾವುದೇ ಸಮಂಜಸವಾದ ಉತ್ತರ ಈ ಪ್ರಾಧಿಕಾರದ ಮುಂದೆ ಒಪ್ಪಿಸದೇ ಇರುವುದರಿಂದ ಮತ್ತು ವಾಹನ ಮಾಲೀಕರು ಅಥವಾ ಸಂಬಂಧಪಟ್ಟವರು ತನ್ನ ನಿರಪರಾಧಿತ್ವವನ್ನು ಸಾಬೀತುಪಡಿಸಿಕೊಂಡು ಸೂಕ್ತ ದಾಖಲಾತಿಗಳೊಂದಿಗೆ ವಾಹನದ ಮಾಲೀಕತ್ವವನ್ನು ಕೋರಿ ಈ ಪ್ರಾಧಿಕಾರದ ಮುಂದೆ ಹಾಜರಾಗಿರುವುದಿಲ್ಲ. ಆರೋಪಿಗಳನ್ನು ಪತ್ತೆ ಹಚ್ಚಲು ಕಷ್ಟಸಾಧ್ಯವಾಗಿರುತ್ತದೆ ಹಾಗೂ ವಶಪಡಿಸಿಕೊಂಡ ಅಂಬಾಸಿಡರ್ ಕಾರನ್ನು ಸುಮಾರು ಒಂದು ವರ್ಷ ಐದು ತಿಂಗಳು ಕಳೆದಿದ್ದರೂ ವಾಹನದ ಮಾಲೀಕತ್ವವನ್ನು ಕೋರಿ ಈ ಪ್ರಾಧಿಕಾರಕ್ಕೆ ಯಾರೊಬ್ಬರೂ ಅರ್ಜಿಯನ್ನು ಸಲ್ಲಿಸದೇ ಇರುವುದರಿಂದ ವಾಹನದ ಮಾಲೀಕರು ತನ್ನ ಸ್ವಇಚ್ಛೆಯಿಂದಲೇ ವಾಹನವನ್ನು ಅಕ್ರಮವಾಗಿ ಮದ್ಯ ಸಾಗಾಟ ಮಾಡಲು ಬಳಸಿಕೊಂಡಿರುವುದು ಪ್ರಾಧಿಕಾರ ಮನಗಂಡಿದ್ದು, ಸದರಿ ವಾಹನವನ್ನು ತೆರೆದಿಟ್ಟ ಬಯಲಿನಲ್ಲಿ ನಿಲ್ಲಿಸಿರುವುದರಿಂದ ಮಳೆ, ಬಿಸಿಲು, ಗಾಳಿಗೆ ಸಿಲುಕಿ ತುಕ್ಕು ಹಿಡಿದು ಹಾಳಾಗುವ ಸಾಧ್ಯತೆ ಇರುವುದರಿಂದ, ಇದನ್ನು ಇನ್ನು ಹೆಚ್ಚು ಕಾಲ ಇರಿಸಿಕೊಂಡರೆ ಇನ್ನಷ್ಟು ಶಿಥಿಲಗೊಂಡು ಮೌಲ್ಯಹೀನವಾಗುವ ಸಾಧ್ಯತೆಯಿದ್ದು ಸರ್ಕಾರಕ್ಕೆ ಬರುವ ಆದಾಯ ಕೂಡಾ ಕಡಿಮೆಯಾಗುವ ಸಂಭವವಿರುವುದರಿಂದ, ಅಕ್ರಮವಾಗಿ 103.680 ಲೀಟರ್ ಮದ್ಯ ಅಬಕಾರಿ ಸೊತ್ತು ಸಾಗಾಣಿಕೆಗೆ ಬಳಸಿದ ಅಂಬಾಸಿಡರ್ ಕಾರನ್ನು ಲಭ್ಯವಿರುವ ಲಿಖಿತ ಸಾಕ್ಷಿಯ ದಾಖಲಾತಿಗಳ ಆಧಾರದಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿರುವ ಕಾರಣ ಈ ಆದೇಶ.

**ಆದೇಶ**

ನೂರ್‌ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43ಬಿ ಅಡಿಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಅನುಸರಿಸಿದ ನಂತರ ಕಲಂ 43ಎ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಅಬಕಾರಿ ಉಪ ನಿರೀಕ್ಷಕರು (2), ಜಾರಿ ಮತ್ತು ತನಿಖೆ, ಬೆಳ್ತಂಗಡಿ ಇವರ ತಕ್ಷೀರು ಸಂಖ್ಯೆ:6/2007-08, ದಿನಾಂಕ:27.09.2007ರಲ್ಲಿ ಜಪ್ತುಪಡಿಸಿರುವ ಅಂಬಾಸಿಡರ್ ಕಾರು ಸಂಖ್ಯೆ: ಕೆಎ-19-ಎಂ-0352 (ಚಾಸೀಸ್ ನಂ.111-611579 ಮತ್ತು ಇಂಜಿನ್ ನಂ. 6EDO43740) ನ್ನು ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43ಸಿ ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ದಿನಾಂಕ:26.02.2009ರಂದು ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿವಸಗಳ ನಂತರ ಜಾರಿಯಲ್ಲಿ ಬರುತ್ತದೆ.

**ನೂರ್ ಮಹಮ್ಮದ್ ಹುಸೇನ್**

ಪಿ.ಆರ್.249

ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್
ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್ ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ:ಎಸ್‌ಡಿಕೆ/346/ಡಿಟಿಸಿಆರ್/2007–08, ದಿನಾಂಕ:28ನೇ ಫೆಬ್ರವರಿ, 2009**

**ಉಪಸ್ಥಿತರು:** ನೂರ್ ಮಹಮ್ಮದ್ ಹುಸೇನ್ ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಫಿರ್ಯಾದುದಾರರು:**

ಶ್ರೀ ಕೃಷ್ಣ ನಾಯಕ್, ಅಬಕಾರಿ ಉಪ ನಿರೀಕ್ಷಕರು (ನಂ.1) ಜಾರಿ ಮತ್ತು ತನಿಖೆ, ಸುಳ್ಯ.

**ಆರೋಪಿ**

ವಿಶ್ವನಾಥ ರೈ, ಬಿನ್ ದಿ. ಮಾಯಿಲಪ್ಪ ರೈ, ಮಾಳ ಮನೆ, ಕಾಣಿಯೂರು ಗ್ರಾಮ, ಪುತ್ತೂರು.

**ವಾಹನದ ಮಾಲೀಕರು**

ತಿಮ್ಮಪ್ಪ ಬಿನ್ ವೆಂಕಣ್ಣಗೌಡ, ಖದೀರ್ ಹೌಸ್, ಮುರುಳ್ಯ ಮನೆ, ಸುಳ್ಯ.

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:26.02.2008ರಂದು ಫಿರ್ಯಾದುದಾರರು ಹಾಗೂ ಸಿಬ್ಬಂದಿಯೊಂದಿಗೆ ಸುಳ್ಯ ತಾಲ್ಲೂಕಿನ ಮುರುಳ್ಯ ಗ್ರಾಮದ ಕಾಯರ್‌ತಡ್ಕ ಎಂಬಲ್ಲಿ ಅಕ್ರಮ ಮದ್ಯ ಮಾರಾಟ ಮಾಡುತ್ತಿದ್ದಾರೆ ಎಂಬ ದೊರೆತ ಖಚಿತ ವರ್ತಮಾನದ ಮೇರೆಗೆ ಸದರಿ ಸ್ಥಳದಲ್ಲಿ ದಾಳಿ ನಡೆಸಿದ ಸಂದರ್ಭದಲ್ಲಿ ಕಾಯರ್‌ತಡ್ಕ ಎಂಬಲ್ಲಿ ಒಂದು ಮೋಟಾರ್ ಬೈಕನ್ನು ನಿಲಿಸ್ಲಿ ಅದರ ಪಕ್ಕದಲ್ಲಿ ಒಬ್ಬ ವ್ಯಕ್ತಿ ನಿಂತಿರುವುದು ಕಂಡು ಬಂದಿದ್ದು, ಸಮವಸ್ತ್ರದಲ್ಲಿದ್ದ ಸಿಬ್ಬಂದಿಯವರನ್ನು ಕಂಡು ಸದರಿ ಮೋಟಾರ್ ಬೈಕನ್ನು ದಾರಿ ಮಧ್ಯದಲ್ಲಿ ನಿಲ್ಲಿಸಿ ಪರಾರಿಯಾದನು. ಮೋಟಾರ್ ಬೈಕ್‌ನ ಹತ್ತಿರ ಇದ್ದ ವ್ಯಕ್ತಿಗಳಲ್ಲಿ ವಿಚಾರಿಸಿದಾಗ ತಾವು ಮದ್ಯವನ್ನು ಖರೀದಿಸಲು ಬಂದಿರುವುದು ಹಾಗೂ ಆತನು 180 ಎಂ.ಎಲ್.ನ ಬಾಸ್ ವಿಸ್ಕಿಯ ಮದ್ಯವನ್ನು ಮಾರಾಟ ಮಾಡಿರುವುದಾಗಿ ತಿಳಿಸಿದ್ದು, ಮಾರಾಟ ಮಾಡುತ್ತಿದ್ದ ವ್ಯಕ್ತಿ ವಿಶ್ವನಾಥ ರೈ, ಬಿನ್ ದಿ.ಮಾಯಿಲಪ್ಪ ರೈ, ಮಾಳ ಮನೆ, ಕಾಣಿಯೂರು ಗ್ರಾಮ, ಪುತ್ತೂರು ಎಂಬಾತನಾಗಿದ್ದು, ಸದರಿ ವ್ಯಕ್ತಿಯ ಹೇಳಿಕೆಯ ಮೇರೆಗೆ ಬಿಟ್ಟು ಹೋದ ಮೋಟಾರು ಬೈಕನ್ನು ಶೋಧನಾ ಕಾರ್ಯ ನಡೆಸಲು ಮಾನ್ಯ ನ್ಯಾಯಾಲಯದಿಂದ ಸರ್ಚ್ ವಾರಂಟ್‌ನ್ನು ಪಡೆಯಲು ಕಾಲಾವಕಾಶ ಇಲ್ಲದ ಕಾರಣ ಸರ್ಚ್ ಮೆಮೊವನ್ನು ತಯಾರಿಸಿ, ಹಾಜರಿದ್ದ ಸಾಕ್ಷಿದಾರರ ಸಮಕ್ಷಮ ಮೋಟಾರ್ ಬೈಕ್‌ನ ಶೋಧನಾ ಕಾರ್ಯ ಪ್ರಾರಂಭಿಸಿ, ಸದರಿ ಮೋಟಾರ್ ಬೈಕ್‌ನ ನೋಂದಣಿ ಸಂಖ್ಯೆ: ಕೆಎ–21–ಜೆ–3289 ಆಗಿದ್ದು, ಇದು ಟಿ.ವಿ.ಎಸ್. ವಿಕ್ಟರ್ ಜಿಎಕ್ಸ್ ಎಂಬುದಾಗಿದ್ದು, ಇದರ ಚಾಸಿಸ್ ಸಂಖ್ಯೆ: ಎಂಡಿ 625 ಎಎಫ್ 1651 ಎಲ್‌ಎಸ್ 4523 ಮತ್ತು ಇಂಜೀನ್ ಸಂಖ್ಯೆ: ಓಎಫ್‌ಐಎಲ್ 51470743 ಆಗಿರುತ್ತದೆ. ಸದರಿ ಆರೋಪಿಯು ಯಾವುದೇ ದಾಖಲಾತಿಗಳಿಲ್ಲದೆ ಅಕ್ರಮವಾಗಿ ಬೈಕ್‌ನ ಹಿಂದಿನ ಸೀಟ್‌ನ ಮೇಲೆ ಒಂದು ರಟ್ಟಿನ ಪೆಟ್ಟಿಗೆಯಲ್ಲಿ 180 ಎಂ.ಎಲ್.ನ 30 ಸೀಸೆಗಳು ಇರುವುದು ಕಂಡು ಬಂತು. ಸದರಿ ಮದ್ಯವನ್ನು ಪರಿಶೀಲಿಸಿದಾಗ, ಇದು ಬಾಸ್ ವಿಸ್ಕಿಯ ಲೇಬರ್ ಅಂಟಿಸಿರುವ ಮದ್ಯವಾಗಿದ್ದು, ಇದು ಅಕ್ರಮ ಮದ್ಯವಾಗಿರುವುದು ಖಚಿತವಾಗಿರುವುದರಿಂದ, ಹಾಜರಿದ್ದ ಸಾಕ್ಷಿದಾರರ ಸಮಕ್ಷಮ ದೊರೆತ ಮದ್ಯದಿಂದ 180 ಎಂ.ಎಲ್.ನ ಒಂದು ಸೀಸೆಯನ್ನು ರಾಸಾಯನಿಕ ಪರೀಕ್ಷೆಗಾಗಿ ತೆಗೆದು ಅದಕ್ಕೆ ಬಟ್ಟೆ ದಾರದಿಂದ ಸುತ್ತಿ ಇಲಾಖಾ ಸೀಲ್‌ನಿಂದ ಸೀಲ್ ಮಾಡಲಾಯಿತು. ಅದೇ ಸೀಲ್‌ನ ಮಾದರಿ ಮೊಹರಿನ ನಮೂನೆ ಮಾದರಿಯನ್ನು ತಯಾರಿಸಲಾಯಿತು. ಮಾದರಿ ಬಾಟ್ಲಿಗೆ ಆರೋಪಿಯ ಹೆಸರು ಮತ್ತು ವಿಳಾಸದ ಗುರುತಿನ ಚೀಟಿಯನ್ನು ಅಂಟಿಸಲಾಯಿತು. ಇದು 1965ರ ಕರ್ನಾಟಕ ಅಬಕಾರಿ ಕಾಯಿದೆ ಕಲಂ 11, 13, 14 ರಂತೆ ಅಪರಾಧವಾಗಿದ್ದು, ಕಲಂ 32, 34, 38(ಎ) ರಂತೆ ಶಿಕ್ಷಾರ್ಹವಾಗಿರುವುದರಿಂದ ಮದ್ಯ ಮತ್ತು ಸಾಗಾಟಕ್ಕೆ ಬಳಸಿದ ಮೋಟಾರ್ ಬೈಕನ್ನು ಮುಂದಿನ ಸೂಕ್ತ ಕ್ರಮಕ್ಕಾಗಿ ಇಲಾಖಾ ವಶಕ್ಕೆ ತೆಗೆದುಕೊಂಡು ಮಹಜರನ್ನು ಸ್ಥಳದಲ್ಲಿಯೇ ಬರೆದು ಆರೋಪಿ ವಿರುದ್ಧ ಪ್ರಥಮ ಮಾಹಿತಿ ವರದಿ ಸಂಖ್ಯೆ: 15/07–08 ದಿನಾಂಕ:26.02.2008ರಂತೆ ಪ್ರಕರಣವನ್ನು ನೋಂದಾಯಿಸಿ ಮುಂದಿನ ತನಿಖೆಯನ್ನು ಮುಂದುವರಿಸಿರುತ್ತಾರೆ.

ತಕ್ಷೀರಿನಲ್ಲಿ ವಶಪಡಿಸಿಕೊಂಡ ಮೋಟಾರ್ ಬೈಕನ್ನು ಆರ್.ಸಿ. ಮಾಲೀಕರಾದ ತಿಮ್ಮಪ್ಪ, ಬಿನ್ ವೆಂಕಣ್ಣ ಗೌಡ ಖದೀರ್ ಹೌಸ್, ಮುರುಳ್ಯ ಮನೆ, ಸುಳ್ಯ ಇವರು ತಮ್ಮ ವಕೀಲರ ಮುಖಾಂತರ ಈ ಪ್ರಾಧಿಕಾರಕ್ಕೆ ದಿನಾಂಕ:30.04.2008ರಂದು ಅರ್ಜಿ ಸಲ್ಲಿಸಿ, ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಮೋಟಾರ್ ಬೈಕ್‌ನ ನೋಂದಣಿ ಸಂಖ್ಯೆ: ಕೆಎ–21–ಜೆ–3289 ಇದರ ಆರ್.ಸಿ. ಮಾಲೀಕನಾಗಿದ್ದು, ವಶಪಡಿಸಿಕೊಂಡ ವಾಹನವನ್ನು ತಾತ್ಕಾಲಿಕ ನೆಲೆಯಲ್ಲಿ ಬಿಡುಗಡೆ ಮಾಡಿಕೊಡಬೇಕೆಂದು ಅರ್ಜಿ ಸಲ್ಲಿಸಿರುತ್ತಾರೆ.

ಅರ್ಜಿದಾರರಿಗೆ ಈ ಪ್ರಾಧಿಕಾರದಿಂದ ಕರ್ನಾಟಕ ಅಬಕಾರಿ ಕಾಯಿದೆ 1965 ಸೆಕ್ಷನ್ 43(ಬಿ) ಪ್ರಕಾರ ದಿನಾಂಕ:17.07.2008 ರಂದು ಕಾರಣ ಕೇಳಿ ನೋಟೀಸನ್ನು ನೋಂದಣಿ ಅಂಚೆ ಮೂಲಕ ನೀಡಲಾಗಿದ್ದು, ಯಾವುದೇ ಉತ್ತರವನ್ನು ನೀಡಿರುವುದಿಲ್ಲ. ತಕ್ಷೀರಿನಲ್ಲಿ ವಶಪಡಿಸಿಕೊಂಡ ಮೋಟಾರ್ ಬೈಕನ್ನು ನೋಂದಣಿ ಮಾಲೀಕರ ವಿವರ ಮತ್ತು ಮೌಲ್ಯ ಮಾಪನ ವರದಿಯನ್ನು ಪಡೆಯಲು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಮಂಗಳೂರು ಇವರಿಗೆ ಈ ಪ್ರಾಧಿಕಾರದಿಂದ

ದಿನಾಂಕ:12.05.2008ರಂದು ಪತ್ರ ಬರೆಯಲಾಗಿದ್ದು, ಅವರು ದಿನಾಂಕ:30.05.2008ರಂದು ವಾಹನದ ಬಿ ಎಕ್ಸ್‌ಟ್ರ್ಯಾಕ್ಟ್ ವರದಿಯೊಂದಿಗೆ ವಾಹನದ ಈಗಿನ ಮೌಲ್ಯ ರೂ.20,000/– ಗಳಾಗಬಹುದೆಂದು ಅಂದಾಜಿಸಿ ದೃಢೀಕರಣ ಪತ್ರ ನೀಡಿರುತ್ತಾರೆ.

ವಾಹನದ ಬಿಡುಗಡೆ ಕುರಿತು ದಾಖಲಾತಿಗಳನ್ನು ಸಲ್ಲಿಸುವ ಬಗ್ಗೆ ವಾಹನದ ಮಾಲೀಕರಿಗೆ ಈ ಪ್ರಾಧಿಕಾರದಿಂದ ದಿನಾಂಕ:10.07.2008ರಂದು ನೋಟೀಸು ನೀಡಲಾಗಿದ್ದು, ಸದರಿ ನೋಟೀಸಿಗೆ ಅನುಸಾರ ಅರ್ಜಿದಾರರು ಈ ಪ್ರಾಧಿಕಾರಕ್ಕೆ ರೂ.20,000/– ಮೌಲ್ಯಕ್ಕೆ ಸಮಾನವಾದ ಬ್ಯಾಂಕ್ ಭದ್ರತೆ ಸಂಖ್ಯೆ: 1/08 ದಿನಾಂಕ:30.07.2008ರಂತೆ ಭದ್ರತಾ ಪತ್ರ ಒಪ್ಪಿಸಿ, ಅಷ್ಟೇ ಮೊತ್ತಕ್ಕೆ ಇಬ್ಬರು ಜಾಮೀನುದಾರರಾದ 1) ಶ್ರೀ ಕೆ. ಕೊರಗಜ್ಜ, ಬಿನ್ ಭೋಜ, ಹೌಸ್ ನಂ.2–64, ಕಾಣಿಯೂರು, ಮಂಗಳೂರು ತಾಲ್ಲೂಕು ಮತ್ತು 2) ಶ್ರೀ ವಿಶ್ವನಾಥ ರೈ ಬಿನ್ ಮೈಲಾಪು ರೈ, ಮಲಾಯಿ ಮನೆ, ಕಾಣಿಯೂರು ಗ್ರಾಮ, ಮಂಗಳೂರು ತಾಲ್ಲೂಕು ಇವರಿಂದ ಸದರಿ ಮೊತ್ತಕ್ಕೆ ಬಾಂಡ್ ಪತ್ರ ಮತ್ತು ಸದರಿ ವ್ಯಕ್ತಿಗಳಿಂದ ಅಫಿದಾವಿತ್‌ಗಳನ್ನು ಹಾಜರುಪಡಿಸಿರುವುದರಿಂದ, ಫಿರ್ಯಾದುದಾರರು ವಶಪಡಿಸಿಕೊಂಡ ವಾಹನ ಸಂಖ್ಯೆ: ಕೆಎ–21–ಜೆ–3289 ಮೋಟಾರ್ ಬೈಕನ್ನು ಕರ್ನಾಟಕ ಅಬಕಾರಿ ಕಾಯಿದೆ ಕಲಂ 43(ಎ) ಮತ್ತು (ಬಿ) ಅಡಿಯಲ್ಲಿ ಮುಂದಿನ ಮುಟ್ಟುಗೋಲು ವಿಚಾರಣೆಯನ್ನು ಕಾಯ್ದಿರಿಸಿ, ಕರ್ನಾಟಕ ಅಬಕಾರಿ ಕಾಯಿದೆ ಕಲಂ 43(ಎ)(2)(1) ತಿದ್ದುಪಡಿ ನಿಯಮಾನುಸಾರ ಕೆಲವು ಷರತ್ತುಗಳಿಗೊಳಪಟ್ಟು ವಾಹನ ನೋಂದಾಯಿತ ಮಾಲೀಕರಾದ ಶ್ರೀ ತಿಮ್ಮಪ್ಪಗೌಡ ಇವರಿಗೆ ದಿನಾಂಕ:02.08.2008ರಂದು ಮಧ್ಯಂತರ ಸುಪರ್ಧಿಗೆ ಬಿಡುಗಡೆಗೊಳಿಸಲಾಗಿದೆ.

ಅಬಕಾರಿ ಉಪ ನಿರೀಕ್ಷಕರು (ನಂ.1), ಸುಳ್ಯ ವಲಯ ಇವರ ತನಿಖಾ ವರದಿ ಸಂಖ್ಯೆ: 51/07–08 ದಿನಾಂಕ:28.05.2008ರ ವರದಿಯಲ್ಲಿ ವಶಪಡಿಸಿಕೊಂಡ ಮದ್ಯದಿಂದ ರಾಸಾಯನಿಕ ಪರೀಕ್ಷೆಗೆ ತೆಗೆದ ಮಾದರಿ ಸೀಸೆಯನ್ನು ರಾಸಾಯನಿಕ ವಿಶ್ಲೇಷಣೆಗೆ ಕಳುಹಿಸಲಾಗಿದ್ದು, ರಾಸಾಯನಿಕ ವಿಶ್ಲೇಷಕರು, ಮಂಗಳೂರು ಇವರ ವರದಿ ಸಂಖ್ಯೆ: ಇ–108 ದಿನಾಂಕ:04.04.2008ರ ವರದಿಯಲ್ಲಿ ಮದ್ಯದ ಮದ್ಯಸಾರ ಪ್ರಮಾಣ 42.0% ಇರುವುದಾಗಿ ದೃಢೀಕರಿಸಿರುತ್ತಾರೆ. ಹಾಗೂ ಸದರಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಮದ್ಯವನ್ನು ಸ್ವಾಧೀನ ಪಡಿಸಿಕೊಳ್ಳುವ ಬಗ್ಗೆ ಈ ಪ್ರಾಧಿಕಾರದಲ್ಲಿ ಯಾರೊಬ್ಬರೂ ಬೇಡಿಕೆ ಅರ್ಜಿ ಸಲ್ಲಿಸದೆ ಇರುವುದರಿಂದ ಸದರಿ ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ನಾಶಪಡಿಸಲು ಶಿಫಾರಸ್ಸು ಮಾಡಿರುವ ಮೇರೆಗೆ ಈ ಪ್ರಾಧಿಕಾರದ ಆದೇಶ ಸಂಖ್ಯೆ: ಎಸ್‌ಡಿಕೆ/346/ಡಿಟಿಸಿಆರ್/07–08 ದಿನಾಂಕ:20.01.2009ರಂದು ತಕ್ಷೀರಿನಲ್ಲಿ ವಶಪಡಿಸಿಕೊಂಡ ವಾಹನದ ಮುಟ್ಟುಗೋಲು ನಡವಳಿಯನ್ನು ಕಾಯ್ದಿರಿಸಿ, ಬಾಕಿ ಉಳಿದ ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಅಬಕಾರಿ ನಿರೀಕ್ಷಕರು, ಸುಳ್ಯ ವಲಯ ಇವರ ಸಮಕ್ಷಮ ಸೂಕ್ತ ಮಹಜರು ಜರುಗಿಸಿ ನಾಶಪಡಿಸಲು ಆದೇಶಿಸಲಾಗಿದೆ.

ನಂತರ ಪ್ರಕರಣದ ವಿಚಾರಣೆಯನ್ನು ಆರಂಭಿಸಿ ಸರ್ಕಾರದ ಅಭಿಯೋಜನೆ ಪರ ಸಾಕ್ಷಿಯನ್ನು ಪ್ರತಿರಕ್ಷಾ ಪರ ಸಾಕ್ಷಿಯನ್ನು ವಿಚಾರಣೆಗೆ ಒಳಪಡಿಸಿ, ಅವರುಗಳ ಹೇಳಿಕೆಗಳನ್ನು ಪಡೆಯಲಾಗಿದೆ. ಈ ಪ್ರಕರಣದಲ್ಲಿ ಸರ್ಕಾರದ ಪರ ಹಾಗೂ ವಾಹನ ಮಾಲೀಕರ ಪರ ಸಲ್ಲಿಸಿರುವ ಸಾಕ್ಷ್ಯಾಧಾರದ ಮೇಲೆ ಈ ಕೆಳಗಿನ ವಿವಾದಾಂಶಗಳನ್ನು ಪರಿಶೀಲಿಸುವ ಅಗತ್ಯವಾಗಿದ್ದು, ಪರಿಶೀಲನಾಂಶಗಳು ಈ ಕೆಳಗಿನಂತಿರುತ್ತದೆ.

1) ದಿನಾಂಕ:26.02.2008 ರಂದು ವಾಹನ ಮೋಟಾರು ಸೈಕಲ್ ಸಂಖ್ಯೆ: ಕೆಎ–21–ಜೆ–3289 ರಲ್ಲಿ ಅಕ್ರಮ ಮದ್ಯ ಮಾರಾಟ ಮತ್ತು ಸಾಗಾಟ ಮಾಡಲಾಗಿತ್ತೇ?

2) ಸದರಿ ವಾಹನದಲ್ಲಿ ಅಕ್ರಮ ಮದ್ಯವನ್ನು ತನ್ನ ತಿಳುವಳಿಕೆಗೆ ಬಾರದೆ ಮಾಡಲಾಗಿತ್ತೇ ಎಂಬುವುದನ್ನು ವಾಹನ ಮಾಲೀಕರು ಸಾಬೀತುಪಡಿಸಿದ್ದಾರೆಯೇ?

3) ಜಪ್ತುಪಡಿಸಲಾದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದೇ?

ಈ ಮೇಲಿನ ಪರಿಶೀಲನಾಂಶಗಳನ್ನು ಲಭ್ಯವಿರುವ ಸಾಕ್ಷಿಗಳ ಆಧಾರದ ಮೇಲೆ ಈ ಕೆಳಗಿನಂತೆ ಉತ್ತರಿಸಲಾಗಿದೆ.

ಒಂದನೇ ಅಂಶವನ್ನು ಗುಣಾತ್ಮಕವಾಗಿ ಹೌದು ಎಂದು. ಎರಡನೇ ಅಂಶವನ್ನು ಸಕರಾತ್ಮಕವಾಗಿ ಇಲ್ಲವೆಂದು ಹಾಗೂ ಮೂರನೇ ಅಂಶವನ್ನು ಅಂತಿಮ ಆದೇಶದಂತೆ.

**ಪ್ರಾ.ಸಾ:1**

ಶ್ರೀ ಕೃಷ್ಣ ನಾಯಕ್, ಅಬಕಾರಿ ಉಪ ನಿರೀಕ್ಷಕರು (ನಂ.1), ಸುಳ್ಯ ವಲಯ ಇವರು ಈ ಪ್ರಕರಣದ ಫಿರ್ಯಾದುದಾರರು ಮತ್ತು ತನಿಖಾಧಿಕಾರಿಯಾಗಿದ್ದು, ಇವರು ದಿನಾಂಕ:10.12.2008 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ತಮ್ಮ ಸಾಕ್ಷಿ ಹೇಳಿಕೆಯನ್ನು ನೀಡಿರುತ್ತಾರೆ.

ತಾನು ದಿನಾಂಕ:09.06.2006 ರಿಂದ ದಿನಾಂಕ:31.03.2008ರವರೆಗೆ ಅಬಕಾರಿ ಉಪ ನಿರೀಕ್ಷಕರಾಗಿ ಸುಳ್ಯ ಜಾರಿ ಮತ್ತು ತನಿಖೆ ವಿಭಾಗದಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದೆ. ದಿನಾಂಕ:26.02.2008 ರಂದು ತಾನು ಸಿಬ್ಬಂದಿಯವರೊಂದಿಗೆ ರಾತ್ರಿ 8–00 ಗಂಟೆಗೆ ಅಬಕಾರಿ ಉಪ ಅಧೀಕ್ಷಕರು, ಪುತ್ತೂರು ವಿಭಾಗರವರ ನಿರ್ದೇಶನದ ಮೇರೆಗೆ ಸುಳ್ಯ ತಾಲ್ಲೂಕು ಮುರುಳ್ಯ ಗ್ರಾಮದ ಸುಳ್ಯ–ಪುತ್ತೂರು ರಸ್ತೆಯ ಕಾಯರ್‌ತಡ್ಕ ಎಂಬಲ್ಲಿ ಅಕ್ರಮ ಮದ್ಯ ಮಾರಾಟ ಮಾಡಲಾಗುತ್ತಿದೆ ಎಂಬ ದೊರೆತ ಖಚಿತ ವರ್ತಮಾನದ ಮೇರೆಗೆ ಇಲಾಖಾ ವಾಹನದಲ್ಲಿ ಸಿಬ್ಬಂದಿಯೊಂದಿಗೆ ಸದರಿ ಸ್ಥಳಕ್ಕೆ ಹೋಗಿ ದಾಳಿ ನಡೆಸಿದ

ಸಂದರ್ಭದಲ್ಲಿ ಒಂದು ಮೋಟಾರು ಬೈಕ್ ಹಾಗೂ ಅದರ ಬಳಿ ಜನರು ನಿಂತಿರುವುದು ಕಂಡುಬಂತು. ಸಮವಸ್ತ್ರದಲ್ಲಿದ್ದ ನಮ್ಮನ್ನು ನೋಡಿ ಸದರಿ ವ್ಯಕ್ತಿಗಳು ಕೂಡಲೇ ಓಡಿ ಹೋಗಿ ಅವರಲ್ಲಿ ಒಬ್ಬಾತನನ್ನು ಹಿಡಿದು ವಿಚಾರಿಸಲಾಗಿ, ಆತನ ಬಳಿ 180 ಎಂ.ಎಲ್.ನ ಬಾಸ್ ವಿಸ್ಕಿ ಬಾಟಲ್‌ಗಳಿರುವುದು ಕಂಡು ಬಂತು. ನಂತರ ಆತನನ್ನು ವಿಚಾರಿಸಲಾಗಿ ಓಡಿ ಹೋದ ವ್ಯಕ್ತಿಗಳ ಪೈಕಿ ಒಬ್ಬ ವಿಶ್ವನಾಥ ರೈ ಎಂದು, ಆತನಿಂದ ರೂ.40ಕ್ಕೆ ಸದರಿ ಮದ್ಯದ ಪ್ರತಿ ಬಾಟಲ್‌ಗಳನ್ನು ಖರೀದಿಸಿ ಮಾರಾಟ ಮಾಡುವುದಾಗಿ ತಿಳಿಸಿದನು. ಶೋಧನಾ ಕಾರ್ಯ ಮಾಡಲು ಕೋರ್ಟ್‌ನ ವಾರಂಟ್ ಪಡೆಯಲು ಸಾಧ್ಯವಾಗದೇ ಇರುವುದರಿಂದ ಸರ್ಚ್ ಮೆಮೊವನ್ನು ತಯಾರಿಸಿ ವಾಹನ ಮತ್ತು ಮದ್ಯವನ್ನು ಅಮಾನತುಪಡಿಸಲಾಯಿತು. ಮೋಟಾರ್ ಬೈಕ್ ಸಂಖ್ಯೆ: ಕೆಎ–21–ಜೆ–3289ರ ಮೇಲೆ ಒಂದು ರಟ್ಟಿನ ಪೆಟ್ಟಿಗೆಯಲ್ಲಿ 180 ಎಂ.ಎಲ್.ನ 30 ಬಾಸ್ ವಿಸ್ಕಿ ಬಾಟ್ಲಿಗಳಿದ್ದು, ಅದರಲ್ಲಿ ಒಟ್ಟು 5–400 ಲೀಟರ್ ಮದ್ಯ ಇತ್ತು, ಆರೋಪಿಯು ಓಡಿ ಹೋದ ಕಾರಣ ವಾಹನದಲ್ಲಿ ಅಕ್ರಮ ಮದ್ಯ ಸಾಗಾಟ ಮಾಡಿರುವುದು ಖಚಿತವಾದ ಕಾರಣ ಸ್ಥಳದಲ್ಲಿಯೇ ಮಹಜರು ನಡೆಸಿ, ಮಹಜರನ್ನು ನಿಶಾನೆ ಪಿ.1 ಎಂದು ಸಾಕ್ಷಿ ಸಹಿಯನ್ನು ನಿಶಾನೆ ಪಿ.1(ಎ) ಎಂದು ಗುರುತಿಸಲಾಯಿತು. ಸ್ಥಳದಲ್ಲಿಯೇ ಒಂದು ಬಾಟಲಿಯನ್ನು ರಾಸಾಯನಿಕ ಪರೀಕ್ಷೆಗಾಗಿ ತೆಗೆದು ಸೀಲ್ ಮಾಡಲಾಯಿತು. ಮಾದರಿ ಮೊಹರನ್ನು ಸ್ಥಳದಲ್ಲಿಯೇ ತಯಾರಿಸಲಾಯಿತು. ಓಡಿ ಹೋದ ಆರೋಪಿಯ ಹೆಸರು, ವಿಳಾಸವನ್ನು ಸ್ಥಳದಲ್ಲಿದ್ದ ಬಾಲಕೃಷ್ಣ ಎಂಬಾತನು ತಿಳಿಸಿರುತ್ತಾನೆ. ಪ್ರಥಮ ಮಾಹಿತಿ ವರದಿಯನ್ನು ತಯಾರಿಸಿ ಅದನ್ನು ನಿಶಾನೆ ಪಿ.2 ಎಂದು ಗುರುತಿಸಿ ಸಾಕ್ಷಿಯ ಸಹಿಯನ್ನು ನಿಶಾನೆ ಪಿ.2ಎ ಎಂದು ಗುರುತಿಸಲಾಯಿತು. ವಾಹನದ ಬಗ್ಗೆ ಬಿ ಎಕ್ಸ್‌ಟ್ರ್ಯಾಕ್ಟ್‌ನ್ನು ಪಡೆಯಲಾಗಿದ್ದು, ಅದನ್ನು ನಿಶಾನೆ ಪಿ.3 ಎಂದು ಗುರುತಿಸಲಾಯಿತು. ವಾಹನದ ಮಾಲೀಕರು ತಿಮ್ಮಪ್ಪಗೌಡ ಎಂದು ತಿಳಿದು ಬಂತು. ಮಾದರಿ ಮದ್ಯವನ್ನು ದಿನಾಂಕ:06.03.2008ರಂದು ರಾಸಾಯನಿಕ ವಿಶ್ಲೇಷಣೆಗೆ ಕಳುಹಿಸಿ, ದಿನಾಂಕ:11.04.2008 ರಂದು ಪಡೆದ ರಾಸಾಯನಿಕ ವಿಶ್ಲೇಷಣಾ ವರದಿಯಲ್ಲಿ, ವಶಪಡಿಸಿಕೊಂಡ ಮದ್ಯದಲ್ಲಿ 42% ಮದ್ಯಸಾರ ಇರುವುದು ದೃಢಪಟ್ಟಿದ್ದು, ರಾಸಾಯನಿಕ ವಿಶ್ಲೇಷಣಾ ವರದಿಯನ್ನು ನಿಶಾನೆ ಪಿ.4 ಎಂದು ಗುರುತಿಸಲಾಯಿತು. ಪ್ರಕರಣದ ತನಿಖೆ ನಡೆಸಿ ನ್ಯಾಯಾಲಯಕ್ಕೆ ದೋಷಾರೋಪಣಾ ಪಟ್ಟಿಯನ್ನು ಸಲ್ಲಿಸಿರುತ್ತೇನೆ. ವಿಚಾರಣಾ ವರದಿಯನ್ನು ಪ್ರಾಧಿಕಾರಕ್ಕೆ ದಿನಾಂಕ:28.05.2008ರಂದು ಸಲ್ಲಿಸಿರುತ್ತೇನೆ. ಅದನ್ನು ನಿಶಾನೆ ಪಿ.5 ಎಂದು, ಸಾಕ್ಷಿ ಸಹಿಯನ್ನು ನಿಶಾನೆ ಪಿ.5ಎ ಎಂದು ಗುರುತಿಸಲಾಯಿತು. ವಶಪಡಿಸಿಕೊಂಡ ಮೋಟಾರ್ ಬೈಕನ್ನು ಗುರುತಿಸುತ್ತೇನೆ. (ಅರ್ಜಿದಾರರು ವಾಹನದ ಮಧ್ಯಂತರ ಸ್ವಾಧೀನ ಪಡೆದುಕೊಂಡು ಈ ದಿನ ನ್ಯಾಯಾಲಯದ ಮುಂದೆ ಹಾಜರುಪಡಿಸಿರುವುದಿಲ್ಲ) ವಶಪಡಿಸಿದ ಮದ್ಯವನ್ನು ನಾಶಪಡಿಸಲು ಮೇಲಾಧಿಕಾರಿಗಳಿಗೆ ವರದಿ ಸಲ್ಲಿಸಿರುತ್ತೇನೆ.

ಪಾಟೀ ಸವಾಲಿಗೆ ಉತ್ತರಿಸುತ್ತಾ ಆರ್.ಸಿ. ಮಾಲೀಕರ ಹೆಸರು ಪ್ರಾದೇಶಿಕ ಸಾರಿಗೆ ಅಧಿಕಾರಿಯವರಿಂದ ನೀಡಲಾಗಿರುವ ವರದಿಯಲ್ಲಿ ಹೆಸರಿಸಿರುವುದಲ್ಲದೆ ಬೇರೆ ಯಾವುದೇ ಕಾರಣ ತಿಳಿದಿರುವುದಿಲ್ಲ. ಅಪರಾಧ ಪತ್ತೆ ಸ್ಥಳವು ತಮ್ಮ ಕಛೇರಿಯಿಂದ ಸುಮಾರು 20 ಕಿ.ಮೀ. ದೂರದಲ್ಲಿರುತ್ತದೆ. ತಾನು ಕರ್ತವ್ಯ ನಿಮಿತ್ತ ಕಛೇರಿಯಲ್ಲಿ ಸಾಮಾನ್ಯವಾಗಿ ಬೆಳಿಗ್ಗೆ 8–30 ರಿಂದ ರಾತ್ರಿ 10–30 ಗಂಟೆಯವರೆಗೆ ಕೆಲವು ಸಂದರ್ಭದಲ್ಲಿರುತ್ತೇನೆ. ತನ್ನ ಕಛೇರಿಯಲ್ಲಿ ಚಲನವಲನ ವಹಿ ಎಂಬ ದಾಖಲೆ ಇರಿಸಿಕೊಂಡಿದ್ದು, ಈ ಕಛೇರಿಯಲ್ಲಿ ತನ್ನ ದೈನಂದಿನ ಕಾರ್ಯಚಟುವಟಿಕೆ ನಮೂದಿಸಲಾಗುತ್ತದೆ. ಈ ಪ್ರಕರಣಕ್ಕೆ ಸಂಬಂಧಿಸಿ ದಾಖಲೆ ತನ್ನ ಕಛೇರಿಯ ಚಲನವಲನ ವಹಿಯಲ್ಲಿ ಕಂಡುಬರುತ್ತದೆ. ಈ ವಹಿಯ ಮಾಹಿತಿಗಳನ್ನು ಈ ಪ್ರಕರಣದ ವರದಿಯೊಂದಿಗೆ ಈ ಪ್ರಾಧಿಕಾರದಲ್ಲಿ ಸಲ್ಲಿಸಿರುವುದಿಲ್ಲ. ನಮಗೆ ಪ್ರಕರಣ ಪತ್ತೆಯಾದ ರಾತ್ರಿ ಸುಮಾರು 7–30 ಗಂಟೆಗೆ ದೂರವಾಣಿ ಮೂಲಕ ಮಾಹಿತಿ ತಲುಪಿದ್ದು, ಮಾಹಿತಿದಾರರು ಯಾರು ಎಂದು ತಿಳಿದಿರುವುದಿಲ್ಲ. ನಮ್ಮ ಮೇಲಾಧಿಕಾರಿಯಾದ ಅಬಕಾರಿ ಉಪ ಅಧೀಕ್ಷಕರ ಕಛೇರಿ ಪುತ್ತೂರು ಕೇಂದ್ರ ಸ್ಥಾನದಲ್ಲಿದ್ದು, ಕಾಯರ್ ತಡ್ಕ ಎಂಬಲ್ಲಿಗೆ ಸುಮಾರು 15 ಕಿ.ಮೀ. ದೂರವಿರಬಹುದು. ನನಗೆ ದೂರವಾಣಿ ಮೂಲಕ ಮಾಹಿತಿ ತಿಳಿದ ತಕ್ಷಣ ನಾನು ಕಛೇರಿಯಿಂದ ಅಪರಾಧ ಸ್ಥಳಕ್ಕೆ ಹೊರಟಿರುತ್ತೇನೆ. ನಾವು ಬೆಳ್ಳಾರೆ ಪಂಜ ರೂಟಿನಲ್ಲಿ ಹೊರಟಿರುತ್ತೇವೆ.

ನಾವು ಅಪರಾಧ ಸ್ಥಳ ತಲುಪಿದಾಗ ಅಲ್ಲಿ ಸೇರಿದ ಜನರ ಸಂಖ್ಯೆ: ಅಂದಾಜಿಸಲು ಸಾಧ್ಯವಿಲ್ಲ. ನಾವು ಪ್ರಥಮ ಬಾರಿಗೆ ಅಪರಾಧ ಸ್ಥಳಕ್ಕೆ ತಲುಪಿ ಜೀಪನ್ನು ನಿಲ್ಲಿಸಿ ಒಂದು ಬೈಕ್ ನಿಂತಿರುವ ಅಂತರ ಸುಮಾರು 20 ಮೀಟರ್ ಆಗಬಹುದು. ಅದನ್ನು ಲೆಫ್ಟ್ ಸೈಡ್ ಸ್ಟ್ಯಾಂಡ್ ಹಾಕಿ ನಿಲ್ಲಿಸಲಾಗಿತ್ತು. ನಾವು ಒಬ್ಬ ವ್ಯಕ್ತಿಯನ್ನು ಆ ಬೈಕ್ ಬಿಟ್ಟು ಸುಮಾರು 5 ಮೀಟರ್ ದೂರದಲ್ಲಿ ತಡೆದು ಹಿಡಿದಿರುತ್ತೇವೆ. ಅವನನ್ನು ಪರಿಶೀಲಿಸಿ ನೋಡಲಾಗಿ, ಅವನ ವಶದಲ್ಲಿ ಒಂದು ಮದ್ಯದ ಬಾಟಲ್ ದೊರೆತಿದ್ದು ಅದನ್ನು ವಶಪಡಿಸಲಾಗಿರುತ್ತದೆ. ಅದನ್ನು ಈ ಮಹಜರಿನಲ್ಲಿ ನಮೂದಿಸಿರುವುದಿಲ್ಲ. ಅಪರಾಧ ಸ್ಥಳದಲ್ಲಿ ಯಾವುದೇ ಅಪರಾಧಕ್ಕೆ ಒಳಪಟ್ಟ ಸೊತ್ತುಗಳು ಜಫ್ತಾದಲ್ಲಿ ಅವುಗಳ ಎಲ್ಲಾ ಮಾಹಿತಿಯನ್ನು ಮಹಜರಿನಲ್ಲಿ ತಿಳಿಸಬೇಕಾಗಿರುವುದು ನಾನು ತಿಳಿದಿರುತ್ತೇನೆ. ನಾವು ವಶಪಡಿಸಿಕೊಂಡ ಸೊತ್ತುಗಳ ಪೈಕಿ 180 ಎಂ.ಎಲ್.ನ ಬಾಸ್ ವಿಸ್ಕಿ ಮಾತ್ರ ಎಂದು ತಿಳಿಸಿದ್ದು, ಅದು ಈ ರಟ್ಟಿನ ಪೆಟ್ಟಿಗೆಯೊಂದಿಗೆ ಜಪ್ತು ಮಾಡಿರುವುದೆಂದು ತಿಳಿಸಿರುವುದಿಲ್ಲ. ನಾನು ಜಪ್ತು ಮಾಡಿರುವ ಅಕ್ರಮ ಮದ್ಯ ಮತ್ತು ಬೈಕ್ ಇದ್ದ ಸ್ಥಳದ ಸುತ್ತಮುತ್ತ ಗೇರು ತೋಟಗಳ ಪರಿಸರವಾಗಿರುತ್ತದೆ. ನಾನು ಅಪರಾಧ ಸ್ಥಳಕ್ಕೆ ಹೋದಾಗ ರಾತ್ರಿ 8–30 ಗಂಟೆಯಾಗಿದ್ದು, ಸುತ್ತಮುತ್ತಲು ಯಾವುದೇ ಪರಿಸರ ನೋಡಲು ಸಾಧ್ಯವಿರುವುದಿಲ್ಲ. ಅಪರಾಧ ಸ್ಥಳದಲ್ಲಿ ನಾವು ಒಂದು ಗಂಟೆ ಇದ್ದೆವು.

ನಾನು ಅಪರಾಧ ಸ್ಥಳಕ್ಕೆ ಹೋಗಿದ್ದು, ಸ್ಥಳದಲ್ಲಿ ಜಪ್ತಾಗಿರುವ ವಾಹನದಿಂದ ಮದ್ಯವನ್ನು ವಶಪಡಿಸಿಕೊಳ್ಳಲಾಗಿದೆ ಎಂಬುವುದು ಸುಳ್ಳು ಎಂಬುವುದು ಸರಿಯಲ್ಲ. ಕಾಯರ್‌ತಡ್ಕ ಎಂಬ ಸ್ಥಳದ ಹತ್ತಿರದ ಗ್ರಾಮ ಬಾಳಿಲವಾಗಿರುತ್ತದೆ. ಆರ್.ಸಿ. ಮಾಲೀಕರು ನಾನು ವಶಪಡಿಸಿಕೊಂಡಿರುವ ಮೋಟಾರ್ ಬೈಕನ್ನು ಅವರ ಗೇರು ತೋಟಕ್ಕೆ ಹೋಗುವಾಗ ಮಧ್ಯಾಹ್ನ 3–00 ಗಂಟೆಗೆ ರಸ್ತೆ ಬದಿ ನಿಲ್ಲಿಸಿ ತೋಟಕ್ಕೆ ಹೋಗಿದ್ದು, ವಾಪಸ್ಸು ಸುಮಾರು 5–20 ಗಂಟೆಗೆ ಬಂದಾಗ ಅಲ್ಲಿ ಆ ವಾಹನವು ಇರಲಿಲ್ಲ ಎಂಬುದು ತನಗೆ ತಿಳಿದಿರಲಿಲ್ಲ. ಆರ್.ಸಿ. ಮಾಲೀಕರು ತಮ್ಮ ಬೈಕ್ ಮಾಯವಾಗಿರುವ ಬಗ್ಗೆ ವಿಚಾರಿಸಿದ್ದು, ಬೈಕನ್ನು ಅಬಕಾರಿ ಇಲಾಖೆ ಸಿಬ್ಬಂದಿಯವರು ಕೊಂಡು ಹೋಗಿದ್ದಾರೆ ಎಂಬ ಮಾಹಿತಿ ಎಂದು ತಿಳಿದು ತನ್ನ ಕಛೇರಿಗೆ ಅದೇ ದಿವಸ ರಾತ್ರಿ ಬಂದು ಬೈಕ್ ಬಗ್ಗೆ ವಿಚಾರಿಸಿರುವುದು ನನಗೆ ತಿಳಿದಿರುವುದಿಲ್ಲ. ಸದರಿಯವರು ಕಛೇರಿಗೆ ಬಂದಾಗ ನನ್ನ ಸಿಬ್ಬಂದಿಯವರು ಆರ್.ಸಿ. ಮಾಲೀಕರನ್ನು ಮರುದಿವಸ ಬೆಳಿಗ್ಗೆ ಬನ್ನಿ ಎಂಬುವುದಾಗಿ ಹೇಳಿರುವುದು ನನಗೆ ತಿಳಿದಿರುವುದಿಲ್ಲ. ಮರುದಿವಸ ಕೂಡಾ ಆರ್.ಸಿ. ಮಾಲೀಕರು ನಮ್ಮ ಕಛೇರಿಗೆ ಬಂದು ಬೈಕ್‌ನ ಬಗ್ಗೆ ವಿಚಾರಿಸಿದಾಗ, ಮತ್ತೆರಡು ದಿವಸ ನಂತರ ಅವರನ್ನು ಬರಲು ಹೇಳಿರುವ ವಿಷಯ ನನಗೆ ತಿಳಿದಿರುವುದಿಲ್ಲ. ನಂತರ ಎರಡು ದಿವಸ ಕಳೆದು ಆರ್.ಸಿ. ಮಾಲೀಕರು ತನ್ನ ಕಛೇರಿಗೆ ಬಂದು ವಾಹನವನ್ನು ಅವರಿಗೆ ಬಿಟ್ಟುಕೊಡಲು ಕೇಳಿದಾಗ, ಅದನ್ನು ವಿಶ್ವನಾಥ ರೈ ಎಂಬ ವ್ಯಕ್ತಿಯ ಮೇಲೆ ಪ್ರಕರಣ ದಾಖಲಿಸಿ, ಸದರಿ ವ್ಯಕ್ತಿಗೆ ಸಂಬಂಧಿಸಿ ಆ ಬೈಕನ್ನು ಪ್ರಕರಣದಲ್ಲಿ ಒಳಪಡಿಸಲಾಗಿದೆ ಹಾಗೂ ಸದರಿ ವಾಹನವು ವಿಶ್ವನಾಥ ಎಂಬವರ ಮೇಲೆ ಪ್ರಕರಣ ದಾಖಲಿಸಿರುವ ವಾಹನವಾಗಿರುತ್ತದೆ. ನೀವು ಸದರಿ ವಾಹನವನ್ನು ಅಧಿಕೃತ ಅಧಿಕಾರಿಗಳ ಪ್ರಾಧಿಕಾರ, ಮಂಗಳೂರು ಇವರ ಕಛೇರಿಯಿಂದ ಸದರಿ ವಾಹನ ಬಿಡುಗಡೆಗೊಳಿಸಿದೆ ಎಂಬುವುದು ಸರಿಯಲ್ಲ. ವಿಶ್ವನಾಥ ರೈ ಎಂಬವರ ವಿರುದ್ಧ ದಾಖಲಾಗಿರುವ ಪ್ರಕರಣಕ್ಕೂ, ಈ ವಾಹನಕ್ಕೂ ಸಂಬಂಧ ಸುಳ್ಳು ಕೇಸು ಹಾಕಿರುವುದು ಎಂದರೆ ಸರಿಯಲ್ಲ ಹಾಗೂ ವಾಹನದ ಮಾಲೀಕರಾದ ತಿಮ್ಮಪ್ಪಗೌಡ ಎನ್ನುವವರನ್ನು ಎರಡನೇ ಆರೋಪಿಯನ್ನಾಗಿ ಮಾಡಿ ಸುಳ್ಳು ದೋಷಾರೋಪಣ ಪಟ್ಟಿ ಸಲ್ಲಿಸಲಾಗಿದೆ ಎನ್ನುವುದು ಸರಿಯಲ್ಲ. ತಾನು ದಾಖಲಿಸಿರುವ ಪ್ರಕರಣದಲ್ಲಿ ಜಪ್ತಾಗಿರುವ ವಾಹನವಾಗಲೀ, ವಾಹನದ ಮಾಲೀಕರಾಗಲಿ ಪ್ರಕರಣದಲ್ಲಿ ಭಾಗಿಯಾಗಿರುವುದಿಲ್ಲ ಎಂಬುವುದು ಸರಿಯಲ್ಲ. ಪ್ರಕರಣದ ಒಂದನೇ ಆರೋಪಿ ವಿಶ್ವನಾಥ ರೈ ಇವರ ವಾಸ ಸ್ಥಳ ಕಾಣಿಯೂರು–ಪುತ್ತೂರು ತಾಲ್ಲೂಕು ಆಗಿದ್ದು, ಮಾಲೀಕರು ತಿಮ್ಮಪ್ಪಗೌಡ, ಮುರುಳ್ಯ–ಸುಳ್ಯ ತಾಲ್ಲೂಕು ಆಗಿರುತ್ತದೆ. ಆರ್.ಸಿ. ಮಾಲೀಕರು ತನ್ನ ತೋಟದ ಕಾರ್ಯಕ್ಕೆ ಹೋಗಿದ್ದ ಸಂದರ್ಭದಲ್ಲಿ ವಿನಾ ಕಾರಣ ಅವರ ಮೋಟಾರ್ ಸೈಕಲನ್ನು ಜಪ್ತುಪಡಿಸಿ ಸುಳ್ಳು ಕೇಸು ಹಾಕಿದ್ದೀರಿ ಎಂಬುವುದು ಸರಿಯಲ್ಲ. ತಾನು ಅಪರಾಧ ಸ್ಥಳದಲ್ಲಿ ಒಬ್ಬ ವ್ಯಕ್ತಿಯನ್ನು ಶೋಧಿಸಿ, ಅವನು ಒಂದು ಮದ್ಯದ ಬಾಟಲ್ ಇಟ್ಟುಕೊಂಡಿದ್ದು, ಅದನ್ನು ಜಪ್ತುಪಡಿಸಿದ ಬೈಕ್‌ನ ಮೂಲಕ ಮಾರಾಟ ಮಾಡಲಾಗಿದೆ ಎಂಬ ಸುಳ್ಳು ಪ್ರಕರಣ ದಾಖಲಿಸಲಾಗಿದೆ ಎಂಬುವುದು ಸರಿಯಲ್ಲ. ಜಪ್ತುಪಡಿಸಿರುವ ವಾಹನವು ಅಪರಾಧಕ್ಕೆ ಒಳಪಟ್ಟಿರುವುದಿಲ್ಲ ಎಂಬುವುದು ಸರಿಯಲ್ಲ. ಕೆಲವು ಸಂದರ್ಭಗಳಲ್ಲಿ ಅನಾಮಧೇಯ ಮಾಹಿತಿ ಬಂದು ಸ್ಥಳಕ್ಕೆ ದಾಳಿವೆಸಗಿದ ಸಂದರ್ಭದಲಿ ವಾರಸುದಾರರಿಲ್ಲದೆ ದಾಸ್ತಾನು ಇರಿಸಿರುವ ಅಕ್ರಮ ಮದ್ಯ ಸಾರಾಯಿ ಸಿಗುವುದು ಸರ್ವೆ ಸಾಮಾನ್ಯ ಪ್ರಕರಣವು ಅಂತಹದೇ ಅನಧಿಕೃತ ಮದ್ಯ ದಾಸ್ತಾನಿನ ಬಗ್ಗೆ ಪತ್ತೆಯಾಗಿದ್ದು, ಈ ಬಗ್ಗೆ ವಾಹನವನ್ನು ಜಪ್ತುಪಡಿಸಿ ಸುಳ್ಳು ಕೇಸು ಹಾಕಿರುವುದು ಸರಿಯಲ್ಲ. ಇಂತಹ ಅನಧಿಕೃತವಾಗಿ ಇರಿಸಲಾದ ಸೊತ್ತುಗಳನ್ನು ವಶಪಡಿಸಿಕೊಂಡು ಕಛೇರಿಯಲ್ಲಿರಿಸಿ ಅವುಗಳನ್ನೇ ಈ ಪ್ರಕರಣದಲ್ಲಿ ತೋರಿಸಿ ಸುಳ್ಳು ಕೇಸು ಹಾಕಲಾಗಿದೆ ಎಂಬುದು ಸರಿಯಲ್ಲ. ತಾನು ಬೈಕ್‌ನೊಂದಿಗೆ ಅಪರಾಧ ಸ್ಥಳದಲ್ಲಿ ವಶಪಡಿಸಿದ 180 ಎಂ.ಎಲ್.ನ ಬಾಸ್ ವಿಸ್ಕಿ ಎಂಬ ಮದ್ಯ ವಶಪಡಿಸಿಕೊಂಡಿಲ್ಲ ಎಂದರೆ ಸರಿಯಲ್ಲ. ಈ ಪ್ರಕರಣಕ್ಕೆ ಸಂಬಂಧಿಸಿ ನಿಶಾನೆ ಪಿ3 ಮಹಜರನ್ನು ತನ್ನ ಕಛೇರಿಯಲ್ಲಿ ತಯಾರಿಸಿದೆ ಎಂಬುವುದು ಸರಿಯಲ್ಲ. ತಾನು ಆರೋಪಿಗಳ ವಿರುದ್ಧ ಸುಳ್ಳು ಕೇಸು ಮಾಡಿದ್ದೇನೆ ಎಂಬುವುದು ಸರಿಯಲ್ಲ.

ಎದುರುದಾರರ ಪರ ವಕೀಲರು ಕೇಳಿದ ಪ್ರಶ್ನೆಗಳಿಗೆ ಉತ್ತರ ಸಲ್ಲಿಸಿ, ಈ ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನದಲ್ಲಿ ಯಾವುದೇ ಮದ್ಯ ಮಾರಾಟ ಮತ್ತು ಸಾಗಾಟ ಮಾಡಿಲ್ಲವೆಂಬುದನ್ನು ಅಲ್ಲಗಳೆದಿದ್ದಾರೆ ಹಾಗೂ ಮದ್ಯ ಮಾರಾಟ ಮತ್ತು ಸಾಗಾಟ ಆಗಿರುವುದನ್ನು ದೃಢಪಡಿಸಿರುತ್ತಾರೆ. ಈ ಸಾಕ್ಷಿದಾರರ ಹೇಳಿಕೆಗಳನ್ನು ಪರಿಶೀಲಿಸಿದಾಗ, ಅವುಗಳನ್ನು ನಂಬದೇ ಇರಲು ಸಕಾರಣ ಇಲ್ಲವೆಂಬ ಅಭಿಪ್ರಾಯ ವ್ಯಕ್ತಪಡಿಸಿರುತ್ತೇನೆ. ಅದಲ್ಲದೆ ಸ್ಥಳದಲ್ಲಿ ತಯಾರಿಸಿದ ಮಹಜರು ಮತ್ತು ಪ್ರಕರಣದ ಪ್ರಥಮ ಮಾಹಿತಿ ವರದಿಯು ಈ ಸಾಕ್ಷಿದಾರರ ಹೇಳಿಕೆಯನ್ನು ಪುಷ್ಟೀಕರಿಸುತ್ತೇನೆ. ಆದುದರಿಂದ ಜಪ್ತುಪಡಿಸಿರುವ ವಾಹನದಲ್ಲಿ ಅಕ್ರಮವಾಗಿ ಮದ್ಯ ಮಾರಾಟ ಮತ್ತು ಸಾಗಾಟ ಮಾಡಿರುವುದು ಸ್ಪಷ್ಟವಾಗಿ ಸಾಬೀತಾಗಿದೆ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತ, ಮೊದಲನೇ ವಿವಾದಾಂಶವನ್ನು ಗುಣಾತ್ಮಕವಾಗಿ ಪರಿಗಣಿಸಲಾಗಿದೆ.

ಈ ಪ್ರಕರಣದ ಎರಡನೇ ಅಂಶವನ್ನು ಪ್ರಕರಣದಲ್ಲಿ ವಶಪಡಿಸಿಕೊಂಡಿರುವ ವಾಹನದಲ್ಲಿ ವಾಹನ ಮಾಲೀಕರಿಗೆ ತಿಳಿಯದೆ ಈ ಕೃತ್ಯವು ಎಸಗಲಾಗಿದೆ ಎಂಬುವುದನ್ನು ಅರ್ಜಿದಾರರು ಸಾಬೀತುಪಡಿಸಬೇಕಾಗಿದ್ದು, ಅರ್ಜಿದಾರರನ್ನು ವಿಚಾರಣೆಗೆ ಹಾಜರುಪಡಿಸಿರುತ್ತಾರೆ. ಅವರ ಹೇಳಿಕೆಯನ್ನು ಈ ಕೆಳಗಿನಂತೆ ಪ್ರಾಧಿಕಾರವು ಪಡೆದಿರುತ್ತದೆ.

**ಡಿಡಬ್ಲ್ಯೂ–1:**

ವಾಹನ ಮಾಲೀಕರಾದ ಶ್ರೀ ಕೆ.ತಿಮ್ಮಪ್ಪಗೌಡ ಇವರು ದಿನಾಂಕ:28.01.2009 ರಂದು ಈ ಪ್ರಾಧಿಕಾರದ ಮುಂದೆ ಸಾಕ್ಷಿ ನುಡಿಯುತ್ತಾ, ತಾನು ಕೆಎ–21–ಜೆ–3289 ಸಂಖ್ಯೆಯ ಮೋಟಾರು ಬೈಕ್ ಇದರ ಆರ್.ಸಿ. ಮಾಲೀಕನಾಗಿದ್ದೇನೆ. ತಾನು

ಕೃಷಿಕನಾಗಿರುತ್ತೇನೆ. ಗೇರು ಹಾಗೂ ಗೇರುಬೀಜದ ಗುತ್ತಿಗೆ ಕಸಬು ಮಾಡುವವನಾಗಿರುತ್ತೇನೆ. ತಾನು ಸುಮಾರು ಒಂದು ವರ್ಷ ಹಿಂದೆ ದಿನಾಂಕ:26.02.2002 ರಂದು ತನ್ನ ಮೋಟಾರು ಬೈಕನ್ನು ಮಾಳ ಎಂಬ ಊರಿನ ರಸ್ತೆ ಬದಿ ನಿಲುಗಡೆಗೊಳಿಸಿ ತನ್ನ ಸ್ವಂತ ಸ್ಥಳಕ್ಕೆ ಬಾಳಿಲ ಎಂಬ ಸ್ಥಳಕ್ಕೆ ಹೋಗಿರುತ್ತೇನೆ. ತಾನು ಸಾಯಂಕಾಲ ಹಿಂತಿರುಗಿ ಬಂದಾಗ ತಾನು ನಿಲುಗಡೆಗೊಳಿಸಿದ ಸ್ಥಳದಲ್ಲಿ ತನ್ನ ವಾಹನ ಇರಲಿಲ್ಲ. ತಾನು ಸ್ಥಳೀಯರಲ್ಲಿ ಬೈಕಿನ ಬಗ್ಗೆ ತಿಳಿಸಿದಾಗ, ನಿಲುಗಡೆಗೊಳಿಸಿದ ಬೈಕನ್ನು ಅಬಕಾರಿ ಇಲಾಖೆಯವರು ಕೊಂಡುಹೋಗಿದ್ದಾರೆ ಎಂದು ತಿಳಿಸಿದರು. ತಾನು ನಂತರ ಸುಳ್ಯ ಪೇಟೆಗೆ ಬಂದು ಅಬಕಾರಿ ಇಲಾಖಾ ಕಛೇರಿಗೆ ಹೋಗಿ ತನ್ನ ಬೈಕನ್ನು ಅಲ್ಲಿ ನೋಡಲಾಗಿ, ಕಛೇರಿಯಲ್ಲಿ ಬೈಕ್ ಇರುವುದು ಕಂಡು, ಅಬಕಾರಿ ಅಧಿಕಾರಿಯವರಲ್ಲಿ ಸದರಿ ಬೈಕನ್ನು ತನ್ನ ಸುಪರ್ದಿಗೆ ನೀಡುವಂತೆ ಕೇಳಿಕೊಂಡಿದ್ದು, ಕಾನೂನು ರೀತಿಯಲ್ಲಿ ಬಿಡುಗಡೆಗೊಳಿಸಬೇಕಾಗಿ ತಿಳಿಸಿರುತ್ತಾರೆ. ಎರಡು ತಿಂಗಳ ನಂತರ ತನ್ನ ವಾಹನಕ್ಕೆ ಬ್ಯಾಂಕ್ ಭದ್ರತೆ ನೀಡಿದಲ್ಲಿ ಮಧ್ಯಂತರ ಬಿಡುಗಡೆ ನೆಲೆಯಲ್ಲಿ ಪಡೆದುಕೊಳ್ಳಬಹುದಾಗಿ ನೋಟೀಸು ಬಂದಿರುತ್ತದೆ. ಆ ದಿವಸ ಅಂದರೆ ದಿನಾಂಕ:26.02.2002 ರಂದು ಮಧ್ಯಾಹ್ನ ತಾನು ಸದರಿ ಬೈಕನ್ನು ರಸ್ತೆಬದಿಯಲ್ಲಿ ನಿಲ್ಲಿಸಿ, ಸಾಯಂಕಾಲ ಸುಮಾರು 6 ಗಂಟೆಗೆ ವಾಪಾಸ್ಸು ಆ ಸ್ಥಳಕ್ಕೆ ಬಂದಿರುತ್ತೇನೆ. ಈ ಪ್ರಕರಣಕ್ಕೆ ಸಂಬಂಧಿಸಿರುವ ಆರೋಪಿಯಾದ ವಿಶ್ವನಾಥ ರೈ ಯವರ ಪರಿಚಯ ತನಗಿರಲಿಲ್ಲ. ತಾನು ತನ್ನ ಬೈಕಿನಲ್ಲಿ ಯಾವುದೇ ಸಾರಾಯಿಯನ್ನು ಕೊಂಡುಹೋಗಿರುವುದಿಲ್ಲ. ತನ್ನ ಮೋಟಾರು ಬೈಕನ್ನು ತಾನೇ ಸ್ವತಃ ಚಲಾಯಿಸಿಕೊಂಡಿದ್ದು, ಯಾರಿಗೂ ಉಪಯೋಗಿಸಲು ನೀಡಿರುವುದಿಲ್ಲ. ಈ ದಿನ ಸದರಿ ವಾಹನವನ್ನು ಈ ಪ್ರಾಧಿಕಾರದ ಮುಂದೆ ಹಾಜರುಪಡಿಸಿರುತ್ತೇನೆ. ತಾನು ಯಾವುದೇ ತಪ್ಪು ಮಾಡಿರುವುದಿಲ್ಲ. ತನ್ನ ವಾಹನವನ್ನು ತನಗೆ ಖಾಯಂ ಆಗಿ ಬಿಡುಗಡೆಗೊಳಿಸಬೇಕಾಗಿ ಕೇಳಿಕೊಳ್ಳುತ್ತೇನೆ.

ಪಾಟೀ ಸವಾಲಿಗೆ ಉತ್ತರಿಸುತ್ತಾ ವಿಶ್ವನಾಥ ರೈಯವರು ಪ್ರಕರಣದ ಆರೋಪಿಯ ಅಣ್ಣ–ಸೀತಾರಾಮ ರೈ ಎಂಬವರ ಪರಿಚಯ ತನಗೆ 15 ವರ್ಷಗಳಿಂದ ಇರುತ್ತದೆ. ಅವರು ಹೋಟೆಲ್ ಉದ್ಯಮ ನಡೆಸುತ್ತಿದ್ದರು. ವಿಶ್ವನಾಥ ರೈಯವರು ಏನು ಉದ್ಯೋಗ ಮಾಡುತ್ತಾರೆ ಎಂಬುವುದು ತನಗೆ ಗೊತ್ತಿಲ್ಲ. ತನಗೆ 2 ಎಕರೆ 80 ಸೆನ್ಸ್ ಜಾಗದಲ್ಲಿ ಅಡಿಕೆ–ಗೇರು ತೋಟವಿದೆ. ತನ್ನ ಮನೆಯಲ್ಲಿ ತನ್ನ ಹೆಂಡತಿ ಮತ್ತು 3 ಮಕ್ಕಳಿದ್ದು, ಮಕ್ಕಳು ವಿದ್ಯಾಭ್ಯಾಸ ಮಾಡುತ್ತಿದ್ದಾರೆ. ತನಗೆ ಅಡಿಕೆ ತೋಟದಿಂದ ವರ್ಷಕ್ಕೆ 8 ಕ್ವಿಂಟಾಲ್ ಅಡಿಕೆ ಬರುತ್ತದೆ. ಕ್ವಿಂಟಾಲ್‌ಗೆ ರೂ.6,000/– ರಂತೆ ಸರಾಸರಿ ಬೆಲೆ ಇರುತ್ತದೆ. ಕೃಷಿ ಖರ್ಚೆಲ್ಲಾ ತೆಗೆದು ತನಗೆ ವರ್ಷಕ್ಕೆ ರೂ.10,000/– ಉಳಿತಾಯವಾಗುತ್ತದೆ. ತನ್ನ ಮೊದಲನೇ ಮಗ ಡಿಗ್ರಿ ಮಾಡಿ ಕಂಪ್ಯೂಟರ್ ಕೋರ್ಸ್ ಮಾಡುತ್ತಿದ್ದಾನೆ. ಎರಡನೇ ಮಗ ಫ್ಯಾಶನ್ ಡಿಸೈನ್ ಕೋರ್ಸ್ ಮಾಡುತ್ತಿದ್ದಾನೆ. ತನ್ನ ಮಗಳು ಕೂಡಾ ಫ್ಯಾಶನ್ ಡಿಸೈನ್ ಕ್ಲಾಸಿಗೆ ಹೋಗುತ್ತಿದ್ದಾಳೆ. ತನ್ನ ಮಕ್ಕಳ ವಿದ್ಯಾಭ್ಯಾಸಕ್ಕಾಗಿ ತಾನು ವಿದ್ಯಾಭ್ಯಾಸ ಸಾಲ ರೂ.2,00,000/– ಪಡೆದಿರುತ್ತೇನೆ. ತನಗೆ ಕೃಷಿ ಬಿಟ್ಟರೆ ಬೇರೆ ಉದ್ಯೋಗವಿಲ್ಲ. ತನ್ನ ಕೃಷಿ ಉತ್ಪನ್ನ ತನ್ನ ಮಕ್ಕಳ ವಿದ್ಯಾಭ್ಯಾಸಕ್ಕೆ ಸಾಕಾಗುವುದಿಲ್ಲ ಎಂದರೆ ಸರಿ, ತಾನು ತೆಗೆದ ಸಾಲವನ್ನೂ ಸಹಾ ಕೃಷಿ ಉತ್ಪನ್ನದಿಂದಲೇ ತೀರಿಸುತ್ತಿದ್ದೆನೆ. ತನ್ನ ಕೃಷಿ ಉತ್ಪನ್ನ ಆದಾಯದಿಂದ ತಾನು ಪಡೆದಿರುವ ಸಾಲಗಳಿಗೆ ಕಂತು ಕಟ್ಟಲು ಕಷ್ಟವಾಗುತ್ತದೆ ಎಂದರೆ ಸರಿ. ತನ್ನ ಕೃಷಿ ಉತ್ಪನ್ನದಿಂದ ಸಾಲ ತೀರಿಸಲು ಸಾಕಾಗದೆ ತಾನು ಅಕ್ರಮ ಮದ್ಯ ಮಾರಾಟ ಮಾಡಲು ಪ್ರಾರಂಭಿಸಿದ್ದೇನೆ ಎಂದರೆ ಸರಿಯಲ್ಲ. ಒಂದೇ ಕಡೆ ಅಕ್ರಮ ಮದ್ಯ ಮಾರಾಟ ಮಾಡಿದಲ್ಲಿ ಅಬಕಾರಿ ದಾಳಿ ಆಗುತ್ತದೆ ಎಂದು ತಾನು ತನ್ನ ಬೈಕಿನಲ್ಲಿ ದಿನವೂ ಒಂದೊಂದು ಸ್ಥಳದಲ್ಲಿ ಅಕ್ರಮ ಮದ್ಯ ಮಾರಾಟ ಮಾಡುತ್ತಿದ್ದೇನೆ ಎಂದರೆ ಸರಿಯಲ್ಲ. ಅಕ್ರಮ ಮದ್ಯ ಮಾರಾಟ ಮಾಡಲು ವಿಶ್ವನಾಥ ರೈಯನ್ನು ನಾನು ನೇಮಿಸಿದ್ದೇನೆ ಎಂದರೆ ಸರಿಯಲ್ಲ. ದಿನಾಂಕ:26.02.2002ರಂದು ವಿಶ್ವನಾಥ ರೈಯವರಿಗೆ ಬೈಕ್ ಕೊಟ್ಟು ಮದ್ಯ ಮಾರಾಟ ಮಾಡಲು ತಾನೇ ಕಳುಹಿಸಿದ್ದೆ ಎಂದರೆ ಸರಿಯಲ್ಲ. ಆ ದಿನ ಕಾಯರ್‌ತಡ್ಕ ಎಂಬಲ್ಲಿ ವಿಶ್ವನಾಥ ರೈ ಬೈಕಿನ ಮೇಲೆ ಮದ್ಯದ ರಟ್ಟಿನ ಪೆಟ್ಟಿಗೆ ಇಟ್ಟುಕೊಂಡು ಮಾರಾಟ ಮಾಡುತ್ತಿದ್ದಾರೆ ಎಂದರೆ ತನಗೆ ಗೊತ್ತಿಲ್ಲ. ಮದ್ಯ ಮಾರಾಟ ಮಾಡುವ ಸಮಯದಲ್ಲಿ ಅಬಕಾರಿ ಇಲಾಖೆಯವರು ದಾಳಿ ಮಾಡಿ ಬೈಕನ್ನು ಮದ್ಯ ಸಮೇತ ಅಮಾನತು ಮಾಡಿರುವರು ಎಂದರೆ ತನಗೆ ಗೊತ್ತಿಲ್ಲ. ವಿಶ್ವನಾಥ ರೈ ಯವರು ದಾಳಿ ಸಮಯ ತಪ್ಪಿಸಿಕೊಂಡು ಓಡಿಹೋದರು ಎಂದರೆ ತನಗೆ ಗೊತ್ತಿಲ್ಲ.

ಸುಳ್ಯ ನ್ಯಾಯಾಲಯಕ್ಕಾಗಲೀ, ಅಬಕಾರಿ ಇಲಾಖೆಯವರಿಗಾಗಲೀ ತನ್ನ ಬೈಕನ್ನು ಅಬಕಾರಿ ಅಧಿಕಾರಿಗಳು ವಿನಾಕಾರಣ ಅಮಾನತ್ತು ಮಾಡಿಕೊಂಡಿರುತ್ತಾರೆ ಎಂದು ತಾನು ದೂರು ಸಲ್ಲಿಸಿರುವುದಿಲ್ಲ. ಸದರಿ ದಿನ ತಾನು ತನ್ನ ಬೈಕನ್ನು ವಿಶ್ವನಾಥ ರೈಗೆ ಮದ್ಯ ಮಾರಾಟ ಮಾಡಲು ಕೊಟ್ಟಿದ್ದೆ ಎಂದರೆ ಸರಿಯಲ್ಲ. ವಾಹನವನ್ನು ಮುಟ್ಟುಗೋಲು ನಡವಳಿಯಿಂದ ಬಿಡುಗಡೆ ಮಾಡಿಸಲು ಸುಳ್ಳು ಸಾಕ್ಷಿ ಹೇಳುತ್ತಿದ್ದೇನೆ ಎಂದರೆ ಸರಿಯಲ್ಲ.

ಅಬಕಾರಿ ಅಧಿಕಾರಿಗಳು ಈ ಪ್ರಕರಣದಲ್ಲಿ ಸುಳ್ಳು ಪ್ರಕರಣವನ್ನು ಸೃಷ್ಟಿ ಮಾಡಲು ಯಾವುದೇ ಕಾರಣವಿರುವುದು ಸಾಕ್ಷ್ಯಾಧಾರ ಮತ್ತು ದಾಖಲಾತಿಗಳಿಂದ ಕಂಡು ಬರುವುದಿಲ್ಲ. ಅದರಂತೆ ಅಭಿಯೋಜಕರ, ಪ್ರಾ.ಸಾ–1 ರ ಹೇಳಿಕೆಗಳು ಮತ್ತು ಹಾಜರುಪಡಿಸಲಾದ ದಾಖಲೆಗಳು ಈ ಪ್ರಕರಣದ ಆರೋಪಗಳು ನಿಸ್ಸಂದೇಹವಾಗಿ ಸಾಬೀತುಪಡುತ್ತದೆ. ಈ ಕಾರಣಗಳಿಂದ ವಾಹನದ ಮಾಲೀಕರು ತನಗೆ ತಿಳಿಯದೆ ವಾಹನವನ್ನು ಅಕ್ರಮ ಮದ್ಯ ಮಾರಾಟ ಮತ್ತು ಸಾಗಾಣಿಕೆಗೆ ಉಪಯೋಗಿಸಲ್ಪಟ್ಟಿದೆ ಎಂಬುವುದನ್ನು ಸಾಬೀತುಪಡಿಸಲು ಪ್ರಾಧಿಕಾರದ ಮುಂದೆ ನಡೆಸಲಾದ ರಕ್ಷಣಾ ಸಾಕ್ಷಿ ವಿಚಾರಣೆ ಹೇಳಿಕೆಯಲ್ಲಿ ತಿಳಿಸಿರುತ್ತಾರೆ. ಈ ಕಾರಣದಿಂದ ಎರಡನೇ ವಿವಾದಾಂಶವನ್ನು ಸಕಾರಾತ್ಮಕವಾಗಿ ಪರಿಗಣಿಸಬಹುದಾಗಿದೆ.

ದಿನಾಂಕ:26.02.2008ರಂದು ಅಬಕಾರಿ ಉಪ ನಿರೀಕ್ಷಕರು ದಾಳಿ ನಡೆಸಿದ ಸಂದರ್ಭದಲ್ಲಿ ವಶಪಡಿಸಿಕೊಂಡಿರುವ 180 ಎಂ.ಎಲ್.ನ 30 ಬಾಟ್ಲಿ ಮದ್ಯವನ್ನು ಅವರು ವಶಪಡಿಸಿಕೊಂಡಿರುವ ಮೋಟಾರ್ ಬೈಕ್‌ನಿಂದಲೇ ವಶಪಡಿಸಿಕೊಳ್ಳಲಾಗಿದೆ ಎಂಬುವುದರ ಬಗ್ಗೆ ಸ್ಥಳ ಮಹಜರ್‌ನಲ್ಲಿ ಕೇವಲ ಇಲಾಖಾ ಸಿಬ್ಬಂದಿಗಳು ಮಾತ್ರ ಸಹಿ ಮಾಡಿದ್ದು, ಸ್ಥಳದಲ್ಲಿಯೇ ಹಾಜರಿದ್ದ ಯಾವೊಬ್ಬರೂ ಖಾಸಗಿ ಸಾಕ್ಷಿದಾರರನ್ನು ಪಡೆಯದಿರುವುದು ಸಂಶಯಕ್ಕೆ ಆಸ್ಪದವಾಗಿದ್ದು, ರಸ್ತೆ ಬದಿಯಲ್ಲಿ ನಿಲ್ಲಿಸಲಾಗಿದ್ದ ಬೈಕ್‌ನಿಂದ ಸದರಿ ಮದ್ಯವನ್ನು ವಶಪಡಿಸಿಕೊಳ್ಳಲಾಗಿದೆ ಎಂಬುವುದರ ಬಗ್ಗೆ ಯಾವುದೇ ಸ್ಪಷ್ಟ ಸಾಕ್ಷ್ಯಾಧಾರಗಳು ಇಲ್ಲದಿದ್ದು, ಸ್ಥಳದಲ್ಲಿ ಆರೋಪಿ ಯಾರು ಎಂಬುವುದು ತಿಳಿಯದೇ ಬೇರೊಬ್ಬ ವ್ಯಕ್ತಿಯು ನೀಡಿರುವ ಹೇಳಿಕೆಯಂತೆ ವಿಶ್ವನಾಥ ರೈ ಎಂಬುವರನ್ನು ಆರೋಪಿಯೆಂದು ಗುರುತಿಸಿರುವ ಮಾತ್ರಕ್ಕೆ ವಾಹನವನ್ನು ಸದರಿ ಮದ್ಯದ ಸಾಗಾಣಿಕೆಗೆ ಬಳಸಲಾಗಿದೆ ಎಂಬ ಬಗ್ಗೆ ನಂಬಲು ಸಾಧ್ಯವಾಗುವುದಿಲ್ಲ ಎಂಬ ತೀರ್ಮಾನಕ್ಕೆ ಬರಬಹುದಾಗಿದೆ.

ಈ ಎಲ್ಲಾ ಕಾರಣಗಳು ಮತ್ತು ಪುರಾವೆಗಳಿಂದ ಈ ಪ್ರಕರಣದಲ್ಲಿ ಜಪ್ತುಗೊಳಿಸಿರುವ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಸೂಕ್ತ ಸಾಕ್ಷ್ಯಾಧಾರಗಳು ಇಲ್ಲದಿರುವುದು ಮನವರಿಕೆಯಾಗಿರುವುದರಿಂದ, ಈ ಕೆಳಗಿನಂತೆ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಎಸ್‌ಡಿಕೆ/346/ಡಿಟಿಸಿಆರ್/2007–08, ದಿನಾಂಕ:28ನೇ ಫೆಬ್ರವರಿ, 2009**

ನೂರ್ ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಾಲಂ 43(ಎ) ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಅನುಸರಿಸಬೇಕಾದ ಕ್ರಮಗಳನ್ನು ಅನುಸರಿಸಿದ ನಂತರ ಕಾಲಂ 43ಎ ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಅಬಕಾರಿ ಉಪ ನಿರೀಕ್ಷಕರು (ನಂ.1) ಜಾರಿ ಮತ್ತು ತನಿಖೆ, ಸುಳ್ಯ ಇವರ ತಕ್ಷೀರು ಸಂಖ್ಯೆ:15/2007–08 ದಿನಾಂಕ:26.02.2008ರಲ್ಲಿ ಜಪ್ತುಪಡಿಸಿರುವ ವಾಹನ ಮೋಟಾರು ಬೈಕ್ ಸಂಖ್ಯೆ: ಕೆಎ–21–ಜೆ–3289 (ಟಿ.ವಿ.ಎಸ್.ವಿಕ್ಟರ್ ಜಿ.ಎಸ್.) ನ್ನು ಆರ್.ಸಿ. ಮಾಲೀಕರಾದ ಶ್ರೀ ತಿಮ್ಮಪ್ಪಗೌಡ ಬಿನ್ ವೆಂಕಣ್ಣಗೌಡ, ಖದೀರ್ ಹೌಸ್, ಮುರುಳ್ಯ ಮನೆ, ಸುಳ್ಯ ಇವರ ಪರ ಬಿಡುಗಡೆಗೆ ಆದೇಶ ನೀಡಿರುತ್ತೇನೆ.

ಈ ಪ್ರಾಧಿಕಾರದಿಂದ ದಿನಾಂಕ:02.08.2008ರಂದು ವಾಹನ ಬಿಡುಗಡೆಗೊಳಿಸಿ ತಾತ್ಕಾಲಿಕವಾಗಿ ಮಧ್ಯಂತರ ಬಿಡುಗಡೆ ಆದೇಶವನ್ನು ರದ್ದುಗೊಳಿಸಿ, ಆರ್.ಸಿ. ಮಾಲೀಕರು ಮಧ್ಯಂತರ ಬಿಡುಗಡೆ ಹೊಂದಿರುವ ಮೋಟಾರು ಬೈಕ್ ಸಂಖ್ಯೆ: ಕೆಎ–21–ಜೆ–3289 (ಟಿ.ವಿ.ಎಸ್. ವಿಕ್ಟರ್ ಜಿ.ಎಸ್.) ಕ್ಕೆ ಸಂಬಂಧಿಸಿ ಈ ಪ್ರಾಧಿಕಾರಕ್ಕೆ ಒಪ್ಪಿಸಿರುವ ಭದ್ರತೆ ಬ್ಯಾಂಕ್ ಗ್ಯಾರಂಟಿ ಪತ್ರವನ್ನು ಹಿಂದಕ್ಕೆ ನೀಡಲು ಆದೇಶಿಸಿದೆ.

ಈ ಆದೇಶವನ್ನು ದಿನಾಂಕ:28.02.2009ರಂದು ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿವಸಗಳ ನಂತರ ಜಾರಿಯಲ್ಲಿ ಬರುತ್ತದೆ.

**ನೂರ್ ಮಹಮ್ಮದ್ ಹುಸೇನ್**
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್
ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅನುಬಂಧ–1**

ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ

ಪ್ರಾ.ಸಾ.–1–ಶ್ರೀ ಕೃಷ್ಣ ನಾಯಕ್, ಅಬಕಾರಿ ಉಪ ನಿರೀಕ್ಷಕರು (ನಂ.1), ಸುಳ್ಯ ವಲಯ

**ಅನುಬಂಧ–2**

**ಫಿರ್ಯಾದುದಾರರ ಪರ ಮಂಡಿಸಲಾದ ದಾಖಲಾತಿಗಳು**

ನಿಶಾನೆ ಪಿ–1: ಸ್ಥಳ ಮಹಜರು ಪ್ರತಿ
ನಿಶಾನೆ ಪಿ–2: ಪ್ರಥಮ ಮಾಹಿತಿ ವರದಿ ಪ್ರತಿ
ನಿಶಾನೆ ಪಿ–3: ಬಿ ಎಕ್ಸ್‌ಟ್ರ್ಯಾಕ್ಟ್ ವರದಿಯ ಪ್ರತಿ
ನಿಶಾನೆ ಪಿ–4: ರಾಸಾಯನಿಕ ತಜ್ಞರ ವರದಿ ಪ್ರತಿ
ನಿಶಾನೆ ಪಿ–5: ದೋಷಾರೋಪಣ ಪಟ್ಟಿಯ ಪ್ರತಿ.
ನಿಶಾನೆ ಪಿ–5(ಎ): ದೋಷಾರೋಪಣ ಪಟ್ಟಿಯಲ್ಲಿ ಸಹಿ ಇರುವ ಪ್ರತಿ.

**ಅನುಬಂಧ–3**

ವಾಹನ ಮಾಲೀಕರ ಪರ ವಿಚಾರಣೆ ಮಾಡಿದ ಸಾಕ್ಷಿದಾರರು

ಡಿಡಬ್ಲ್ಯೂ–1: ಶ್ರೀ ಕೆ. ತಿಮ್ಮಪ್ಪ ಗೌಡ.

**ಅನುಬಂಧ–4**

ವಾಹನ ಮಾಲೀಕರ ಪರವಾಗಿ ಗುರುತಿಸಲಾದ ಸಾಕ್ಷಿದಾರರು

–ಇಲ್ಲ–

**ನೂರ್ ಮಹಮ್ಮದ್ ಹುಸೇನ್**
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್
ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

ಪಿ.ಆರ್.250

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ:ಎಸ್‌ಡಿಕೆ/182/ಡಿಟಿಸಿಆರ್/1997–98, ದಿನಾಂಕ:27ನೇ ಫೆಬ್ರವರಿ, 2009**

**ಉಪಸ್ಥಿತರು:** ನೂರ್ ಮಹಮ್ಮದ್ ಹುಸೇನ್ ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಫಿರ್ಯಾದುದಾರರು:**

ಪೊಲೀಸ್ ಉಪ ನಿರೀಕ್ಷಕರು, ಪುತ್ತೂರು ಗ್ರಾಮಾಂತರ ಪೊಲೀಸ್ ಠಾಣೆ, ಪುತ್ತೂರು.

**ಆರೋಪಿ**

1) ಅಲೆಕ್ಸ್ ಓಸ್ ವಲ್ಡ್ ಡಿಮೊಲ್ಲೋ, ಬಿನ್ ಜೇಮ್ಸ್ ಡಿಮೆಲ್ಲೋ, ವಾಸ: ಪ್ರವಾಸಿ ಬಂಗಲೆ ಎದುರು, ಉಡುಪಿನಗರ.

2) ಗಣಪತಿ ಭಟ್ ಬಿನ್ ನಾರಾಯಣಭಟ್, ವಾಸ: ಪ್ರವಾಸಿ ಬಂಗಲೆ ಎದುರು, ಮೂಡನಿಡಂಬೂರು ಗ್ರಾಮ, ಉಡುಪಿ.

**ವಾಹನದ ಮಾಲೀಕರು**

ಶ್ರೀ ರಮೇಶ್ ಡಿ. ಕೋಟ್ಯಾನ್ ಬಿನ್ ದೇಜು ಪೂಜಾರಿ, ಕಡೆಕಾರು, ಉಡುಪಿ ತಾಲ್ಲೂಕು.

**ಪ್ರಕರಣದ ಮುಖ್ಯಾಂಶಗಳು:**

ಪೊಲೀಸ್ ಉಪ ನಿರೀಕ್ಷಕರು, ಪುತ್ತೂರು ಗ್ರಾಮಾಂತರ ಪೊಲೀಸ್ ಠಾಣೆ, ಪುತ್ತೂರು ಇವರು ತಮ್ಮ ಸಿಬ್ಬಂದಿಯೊಂದಿಗೆ ದಿನಾಂಕ:28.08.1997 ರಂದು ಪುತ್ತೂರು ತಾಲ್ಲೂಕು ಪಾಣಾಜೆ ಗ್ರಾಮದ ಅರ್ಲಪದವು ಎಂಬಲ್ಲಿ ರಸ್ತೆಗಾವಲು ನಡೆಸುತ್ತಿರುವಾಗ ರಾತ್ರಿ ಸುಮಾರು 3.00 ಗಂಟೆ ಸಮಯಕ್ಕೆ ಒಂದು ಟ್ರಾಕ್ಸ್ ಜೀಪು ಸಂಖ್ಯೆ: ಕೆಎ–20–ಎಂ–907 ಪುತ್ತೂರು ಕಡೆಯಿಂದ ಪಾಣಾಜೆ ಕಡೆಗೆ ಬರುತ್ತಿರುವುದನ್ನು ಕಂಡು ತಪಾಸಣೆಗೆಂದು ನಿಲ್ಲಿಸಿ ತಪಾಸಣೆಗೈದಾಗ ಅದರಲ್ಲಿ ಯಾವುದೇ ರಹದಾರಿ ಪತ್ರವಿಲ್ಲದೇ ಅಕ್ರಮವಾಗಿ ಮದ್ಯಸಾರ, ಸಾರಾಯಿ ಸ್ಯಾಚೇಟುಗಳು ಮತ್ತು ಫೆನ್ನಿಯನ್ನು ಸಾಗಾಟ ಮಾಡುತ್ತಿರುವುದನ್ನು ಪತ್ತೆಹಚ್ಚಿ, ಚಾಲಕ ಹಾಗೂ ಸಹ ಚಾಲಕರ ಹೆಸರು ಮತ್ತು ವಿಳಾಸವನ್ನು ವಿಚಾರಿಸಿದಾಗ ಜೀಪನ್ನು ಚಲಾಯಿಸಿದ ಚಾಲಕನ ಹೆಸರು ಅಲೆಕ್ಸ್ ಓಸ್‌ವಲ್ಡ್ ಡಿಮೊಲ್ಲೋ ಬಿನ್ ಜೇಮ್ಸ್ ಡಿಮೆಲ್ಲೋ, ವಾಸ: ಪ್ರವಾಸಿಬಂಗಲೆ ಎದುರು, ಉಡುಪಿ ಹಾಗೂ ಜೀಪಿನಲ್ಲಿದ್ದ ಇನ್ನೊಬ್ಬ ವ್ಯಕ್ತಿಯ ಹೆಸರನ್ನು ಕೇಳಲಾಗಿ ಗಣಪತಿ ಭಟ್ ಬಿನ್ ನಾರಾಯಣ ಭಟ್, ಪ್ರವಾಸಿ ಬಂಗಲೆ ಎದುರು, ಮೂಡನಿಡಂಬೂರು ಗ್ರಾಮ, ಉಡುಪಿ ಎಂದು ತಿಳಿಸಿರುತ್ತಾರೆ. ಇದು ಅಕ್ರಮ ಮದ್ಯಸಾರ, ಸಾರಾಯಿ ಸ್ಯಾಚೇಟು ಹಾಗೂ ಫೆನ್ನಿ ಸಾಗಾಣಿಕೆಯಾಗಿರುವುದರಿಂದ ಈ ಕೆಳಕಂಡ ಸೊತ್ತುಗಳನ್ನು ವಶಪಡಿಸಿಕೊಂಡು ಇದು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 11 ರೀತ್ಯಾ ಉಲ್ಲಂಘನೆ ಹಾಗೂ ಕಲಂ 32 ಮತ್ತು 43ರ ಪ್ರಕಾರ ಶಿಕ್ಷಾರ್ಹವಾಗಿರುವುದರಿಂದ, ಆರೋಪಿಗಳ ವಿರುದ್ಧ ತಕ್ಷೀರು ಸಂಖ್ಯೆ 99/1997, ದಿನಾಂಕ:29.08.1997 ರಂತೆ ಮೊಕದ್ದಮೆಯನ್ನು ದಾಖಲಿಸಿಕೊಂಡು, ಮುಂದಿನ ತನಿಖೆಗಾಗಿ ಸದರಿ ಸೊತ್ತುಗಳನ್ನು ಈ ಪ್ರಾಧಿಕಾರದ ಆದೇಶದನುಸಾರ ಅಬಕಾರಿ ನಿರೀಕ್ಷಕರು, ಪುತ್ತೂರು ವಲಯ ಇವರಿಗೆ ಹಸ್ತಾಂತರಿಸಿರುತ್ತಾರೆ.

**ವಶಪಡಿಸಿಕೊಂಡ ಸೊತ್ತುಗಳು**

1) 100 ಎಂಎಲ್‌ನ 1400 ಸಾರಾಯಿ ಸ್ಯಾಚೇಟುಗಳು–140 ಲೀಟರು ಸಾರಾಯಿ

2) ಎ.ಜೆ.ಫೆನ್ನಿ–180 ಎಂಎಲ್‌ನ 384 ಸೀಸೆಗಳಲ್ಲಿ ಒಟ್ಟು–69.120 ಲೀಟರು ಫೆನ್ನಿ

3) 35 ಲೀಟರು ಗಾತ್ರದ 15 ಪ್ಲಾಸ್ಟಿಕ್ ಕ್ಯಾನುಗಳಲ್ಲಿ ಒಟ್ಟು–525 ಲೀಟರು ಮದ್ಯಸಾರ

4) ಸಾಗಾಣಿಕೆಗೆ ಬಳಸಿದ ಟ್ರಾಕ್ಸ್ ಜೀಪು ಸಂಖ್ಯೆ: ಕೆಎ–20–ಎಂ–907.

ಸದರಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಸೊತ್ತುಗಳಲ್ಲಿ ಮದ್ಯಸಾರ, ಸಾರಾಯಿ ಹಾಗೂ ಫೆನ್ನಿಯನ್ನು ರಾಸಾಯನಿಕ ಪರೀಕ್ಷೆಗೆ ಒಳಪಡಿಸಿದ್ದು, ಸದರಿ ಮಾದರಿಯನ್ನು ವಿಶ್ಲೇಷಿಸಿದ ಕರ್ನಾಟಕ ಸರ್ಕಾರದ ಸಹಾಯಕ ರಾಸಾಯನಿಕ ತಜ್ಞ, ಮಂಗಳೂರುರವರು ದಿನಾಂಕ:28.10.1997ರ ವರದಿಯಲ್ಲಿ ಮದ್ಯಸಾರದಲ್ಲಿ ಮದ್ಯಸಾರ ಪ್ರಮಾಣ 66 ಡಿಗ್ರಿ ಒ.ಪಿ. ಫೆನ್ನಿಯ ಮದ್ಯಸಾರದ ಪ್ರಮಾಣ 25 ಡಿಗ್ರಿ ಯು.ಪಿ. ಮತ್ತು ಸಾರಾಯಿಯ ಮದ್ಯಸಾರದ ಪ್ರಮಾಣ 47 ಡಿಗ್ರಿ ಯು.ಪಿ. ಇರುವುದಾಗಿ ದೃಢೀಕರಣ ಪತ್ರ ನೀಡಿರುತ್ತಾರೆ. ಅಬಕಾರಿ ನಿರೀಕ್ಷಕರು, ಪುತ್ತೂರು ವಲಯ, ಪುತ್ತೂರು ಇವರ ತನಿಖಾ ವರದಿ ಸಂಖ್ಯೆ:18/97–98 ದಿನಾಂಕ:14.11.1997ರಲ್ಲಿ ವಾಹನವನ್ನು ಹೊರತುಪಡಿಸಿ ಉಳಿದ ಸೊತ್ತುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಶಿಫಾರಸ್ಸು ಮಾಡಿರುತ್ತಾರೆ. ಅಬಕಾರಿ ನಿರೀಕ್ಷಕರ ತನಿಖಾ ವರದಿಯನ್ನು ಆಧರಿಸಿ ಅಂದಿನ ಪ್ರಾಧಿಕಾರದ ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರುರವರ ನ್ಯಾಯಾಲಯದ ಆದೇಶ ಸಂಖ್ಯೆ: ಎಸ್‌ಡಿಕೆ:182: ಡಿಟಿಸಿಆರ್:97–98 ದಿನಾಂಕ:25.11.1997ರ ಆದೇಶದಲ್ಲಿ ಪ್ರಕರಣದಲ್ಲಿ ಜಪ್ತು ಪಡಿಸಿಕೊಂಡ ವಾಹನದ

ಮುಟ್ಟುಗೋಲು ಪ್ರಕ್ರಿಯೆಯನ್ನು ಕಾಯ್ದಿರಿಸಿ, ಉಳಿದ ಸೊತ್ತುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಮದ್ಯಸಾರವನ್ನು ಮೈಶುಗರ್ ಸಾರಾಯಿ ಸಂಸ್ಕರಣಾ ಘಟಕಕ್ಕೆ ಹಂಚಿಕೆ ಮಾಡಲು ಹಾಗೂ ಫೆನ್ನಿಯನ್ನು ಹರಾಜಿನ ಮೂಲಕ ವಿಲೇವಾರಿಗೊಳಿಸಲು ಮತ್ತು ಸಾರಾಯಿಯನ್ನು ನಾಶಪಡಿಸಲು ಆದೇಶಿಸಿರುತ್ತಾರೆ.

ಸದರಿ ವಾಹನದ ಆರ್.ಸಿ. ಮಾಲೀಕರಾದ ಶ್ರೀ ರಮೇಶ್ ಡಿ. ಕೋಟ್ಯಾನ್ ಬಿನ್: ದೇಜು ಕರ್ಕೇರಾ, ಕಡೆಕಾರು, ಉಡುಪಿ–576104 ಇವರು ತಮ್ಮ ವಕೀಲರ ಮುಖಾಂತರ ದಿನಾಂಕ:04.10.1997ರಂದು ಅರ್ಜಿಯನ್ನು ಸಲ್ಲಿಸಿ, ಸದರಿ ಅರ್ಜಿಯಲ್ಲಿ ತನ್ನ ವಾಹನವನ್ನು ತನ್ನ ಮಿತ್ರನಿಗೆ ನೀಡಿದ್ದು ಅವರು ತನ್ನ ವಾಹನದಲ್ಲಿ ಅಕ್ರಮ ಸಾಗಾಣಿಕೆಗೆ ಬಳಸಿರುವ ಬಗ್ಗೆ ತನಗೆ ತಿಳಿದಿರುವುದಿಲ್ಲ ತಾನು ಯಾವುದೇ ಅಪರಾಧ ಎಸಗಿಲ್ಲವೆಂದು ವಶಪಡಿಸಿಕೊಂಡ ವಾಹನವನ್ನು ತನ್ನ ಸುಪರ್ಧಿಗೆ ತಾತ್ಕಾಲಿಕ ನೆಲೆಯಲ್ಲಿ ಬಿಡುಗಡೆಗೊಳಿಸಬೇಕೆಂದು ಅರ್ಜಿ ಸಲ್ಲಿಸಿರುತ್ತಾರೆ. ಅರ್ಜಿದಾರರಿಗೆ ಈ ಪ್ರಾಧಿಕಾರದಿಂದ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43 ಬಿ ರಂತೆ ಕಾರಣ ಕೇಳಿ ನೋಟೀಸನ್ನು ದಿನಾಂಕ:16.10.1997 ರಂದು ನೊಂದಣಿ ಅಂಚೆಯ ಮೂಲಕ ನೀಡಲಾಗಿದ್ದು, ಅರ್ಜಿದಾರರು ಈ ಪ್ರಾಧಿಕಾರದಿಂದ ನೀಡಿರುವ ಕಾರಣ ಕೇಳಿ ನೋಟೀಸಿಗೆ ಉತ್ತರವನ್ನು ನೀಡಿರುತ್ತಾರೆ. ಸದರಿ ಅರ್ಜಿದಾರರು ಸಲ್ಲಿಸಿದ ಅರ್ಜಿಯನ್ನು ಪರಿಶೀಲಿಸಿದ ಅಂದಿನ ಪ್ರಾಧಿಕಾರವು ವಾಹನವನ್ನು ತಾತ್ಕಾಲಿಕ ನೆಲೆಯಲ್ಲಿ ಬಿಡುಗಡೆಗೊಳಿಸಿದ್ದಲ್ಲಿ ಇಂತಹ ದುಷ್ಕೃತ್ಯದಲ್ಲಿ ಮರುಭಾಗಿಯಾಗುವರೆಂಬ ಸಂಶಯದ ಮೇರೆಗೆ ವಾಹನವನ್ನು ಅರ್ಜಿದಾರರ ಸುಪರ್ಧಿಗೆ ನೀಡಲು ಕೋರಿದ ಮನವಿಯನ್ನು ತಿರಸ್ಕರಿಸಿ ದಿನಾಂಕ:19.12.1997ರಂದು ಆದೇಶ ನೀಡಿರುತ್ತಾರೆ.

ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರ ಆದೇಶ ಸಂಖ್ಯೆ: ಎಸ್‌ಡಿಕೆ/182/ಡಿಟಿಸಿಆರ್/97–98 ದಿನಾಂಕ:19.12.1997ರ ಆದೇಶದಲ್ಲಿ ಅರ್ಜಿದಾರರ ಮನವಿಯನ್ನು ತಿರಸ್ಕರಿಸಿರುವ ಮೇರೆಗೆ ಸದರಿ ಆದೇಶದ ವಿರುದ್ಧ ಅರ್ಜಿದಾರರು ಮಾನ್ಯ ಸೆಷನ್ಸ್ ನ್ಯಾಯಾಲಯದಲ್ಲಿ ಕ್ರಿಮಿನಲ್ ಅಪೀಲ್ ಸಂಖ್ಯೆ:193/97ರ ಮುಖಾಂತರ ಮೊರೆಹೊಕ್ಕು ಆದೇಶದ ಬಗ್ಗೆ ಮೇಲ್ಮನವಿ ಸಲ್ಲಿಸಿದ್ದು, ಮಾನ್ಯ ಸೆಷನ್ಸ್ ನ್ಯಾಯಾಧೀಶರು ತಮ್ಮ ಆದೇಶ ಸಂಖ್ಯೆ: ಕ್ರಿಮಿನಲ್ ಅಪೀಲ್ ನಂ.193/97 ದಿನಾಂಕ:19.02.1998ರ ಈ ಪ್ರಾಧಿಕಾರವು ಹೊರಡಿಸಿದ ಆದೇಶವನ್ನು ತಳ್ಳಿ ಹಾಕಿ ಅಧಿಕೃತ ಅಧಿಕಾರಿಗಳು ವಶಪಡಿಸಿಕೊಂಡ ಟ್ರಾಕ್ಸ್ ಜೀಪು ಸಂಖ್ಯೆ: ಕೆಎ–20–ಎಂ–907 ನ್ನು ಅರ್ಜಿದಾರರ ಸುಪರ್ದಿಗೆ ಷರತ್ತುಗಳಿಗೆ ಬದ್ಧರಾದಲ್ಲಿ ತಾತ್ಕಾಲಿಕ ನೆಲೆಯಲ್ಲಿ ಬಿಡುಗಡೆಗೊಳಿಸಬೇಕೆಂದು ಆದೇಶ ನೀಡಿರುತ್ತಾರೆ. ಮಾನ್ಯ ಸೆಷನ್ಸ್ ನ್ಯಾಯಾಲಯದ ಆದೇಶದ ಮೇರೆಗೆ ಅಂದಿನ ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರ ನ್ಯಾಯಾಲಯದ ಆದೇಶ ಸಂಖ್ಯೆ: ಎಸ್‌ಡಿಕೆ: 182: ಡಿಟಿಸಿಆರ್:97–98, ದಿನಾಂಕ:27.03.98ರಲ್ಲಿ ಅರ್ಜಿದಾರರು 1,00,000/– ಇಂಡೆಮಿನ್ನಿಟಿ ಬಾಂಡ್ ಹಾಗೂ ಇದೇ ಮೊತ್ತಕ್ಕೆ ಸಮಾನವಾದ ಇಬ್ಬರು ಸ್ಥಳೀಯ ಜಾಮೀನುದಾರರನ್ನು ಸಲ್ಲಿಸಿದ್ದಲ್ಲಿ ಈ ಕೆಳಕಂಡ ಷರತ್ತಿಗೊಳಪಟ್ಟು ಅರ್ಜಿದಾರರ ವಶಕ್ಕೆ ವಾಹನವನ್ನು ತಾತ್ಕಾಲಿಕವಾಗಿ ಬಿಡುಗಡೆ ಮಾಡಲು ಆದೇಶಿಸಿದೆ.

**ಷರತ್ತುಗಳು**

1) ವಾಹನದ ಬಿಡಿಭಾಗಗಳನ್ನು ಮತ್ತು ಬಣ್ಣವನ್ನು ಯಾವುದೇ ಕಾರಣಕ್ಕೂ ಬದಲಾಯಿಸಬಾರದು.

2) ಸದರಿ ವಾಹನದ ಬಗ್ಗೆ ಇರುವ ಮುಟ್ಟುಗೋಲು ನಡವಳಿಗಳು ಅಂತಿಮವಾಗಿ ಇತ್ಯರ್ಥವಾಗುವವರೆಗೆ ವಾಹನವನ್ನು ಯಾರಿಗೂ ಮಾರಾಟ ಮಾಡುವುದಾಗಲೀ ಪರಭಾರೆ ಮಾಡುವುದಾಗಲೀ ಮಾಡಕೂಡದು.

3) ಪ್ರಾಧಿಕಾರವು ಯಾವುದೇ ಸಂದರ್ಭದಲ್ಲಿ ವಾಹನವನ್ನು ಹಾಜರುಪಡಿಸುವಂತೆ ಆದೇಶಿಸಿದ ಪಕ್ಷದಲ್ಲಿ ಸದರಿ ವಾಹನವನ್ನು ಪ್ರಾಧಿಕಾರದ ಮುಂದೆ ಹಾಜರುಪಡಿಸತಕ್ಕದ್ದು.

4) ಈ ಮೇಲಿನ ಷರತ್ತುಗಳನ್ನು ಉಲ್ಲಂಘನೆ ಮಾಡಿದ ಪಕ್ಷದಲ್ಲಿ ಈ ಪ್ರಾಧಿಕಾರಕ್ಕೆ ನೀಡಿರುವ ಇಂಡೆಮಿನ್ನಿಟಿ ಬಾಂಡ್ ಹಾಗೂ ಸ್ವಾಲೆಂಟ್ ಸ್ಯೂರಿಟಿಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

ನಂತರ ಪ್ರಕರಣದ ವಿಚಾರಣೆಯನ್ನು ಪ್ರಾರಂಭಿಸಿ ಸರ್ಕಾರದ ಅಭಿಯೋಜನೆ ಪರ ಎರಡು ಸಾಕ್ಷಿಗಳನ್ನು ವಿಚಾರಣೆಗೆ ಒಳಪಡಿಸಿ ಅವರುಗಳ ಹೇಳಿಕೆಯನ್ನು ಪಡೆಯಲಾಗಿರುತ್ತದೆ. ಪ್ರತಿರಕ್ಷೆ ಸಾಕ್ಷಿಗಳು ಹಾಜರಾಗದೇ ಇದ್ದುದರಿಂದ ಪ್ರತಿರಕ್ಷೆ ಸಾಕ್ಷಿಗಳ ಹೇಳಿಕೆಯನ್ನು ಪಡೆಯಲಾಗಿರುವುದಿಲ್ಲ. ಈ ಪ್ರಕರಣದಲ್ಲಿ ಸರ್ಕಾರದ ಅಭಿಯೋಜನ ಪರ ಸಲ್ಲಿಸಿರುವ ಸಾಕ್ಷ್ಯಾಧಾರಗಳಿಂದ ಈ ಕೆಳಗಿನ ವಿವಾದಾಂಶಗಳನ್ನು ತೀರ್ಮಾನಿಸುವುದು ಅಗತ್ಯವಾಗಿದ್ದು ಪರಿಶೀಲನಾ ಅಂಶಗಳು ಈ ಕೆಳಗಿನಂತಿರುತ್ತದೆ.

1) ದಿನಾಂಕ:29.08.1997 ರಂದು ಟ್ರಾಕ್ಸ್ ಜೀಪು ಸಂಖ್ಯೆ: ಕೆಎ–20–ಎಂ–907ರಲ್ಲಿ ಅಕ್ರಮವಾಗಿ ಯಾವುದೇ ರಹದಾರಿ ಪತ್ರವಿಲ್ಲದೆ ಅಕ್ರಮವಾಗಿ 525.000 ಲೀ. ಮದ್ಯಸಾರ, 69,120 ಲೀ ಫೆನ್ನಿ ಮತ್ತು 100 ಎಂಎಲ್‌ನ 1400 ಸಾರಾಯಿ ಸ್ಯಾಚೇಟುಗಳನ್ನು ಸಾಗಾಣಿಕೆ ಮಾಡಲಾಗಿದೆಯೇ?

2) ವಶಪಡಿಸಿಕೊಂಡಿರುವ ವಾಹನ ಮಾಲೀಕ ತಾನೆಂದು, ತನಗೆ ತಿಳಿಯದೇ ಅಕ್ರಮ ಮದ್ಯಸಾರ, ಫೆನ್ನಿ ಮತ್ತು ಸಾರಾಯಿ ಸಾಗಾಣಿಕೆಗೆ ವಾಹನವನ್ನು ಉಪಯೋಗಿಸಲ್ಪಟ್ಟಿತ್ತು ಎಂಬುದನ್ನು ವಾಹನ ಮಾಲೀಕರು ಸಾಬೀತುಪಡಿಸಿದ್ದಾರೆಯೇ?

3) ಜಪ್ತು ಪಡಿಸಲಾಗಿರುವ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದೇ?

ಈ ಮೇಲಿನ ಪರಿಶೀಲನಾ ಅಂಶಗಳನ್ನು ಲಭ್ಯವಿರುವ ಸಾಕ್ಷ್ಯಾಧಾರಗಳ ಮೇಲೆ ಈ ಕೆಳಗಿನಂತೆ ಉತ್ತರಿಸಿರುತ್ತೇನೆ.

ಒಂದನೇ ಅಂಶವನ್ನು ಗುಣಾತ್ಮಕವಾಗಿ, ಎರಡನೇ ಅಂಶವನ್ನು ನಕರಾತ್ಮಕವಾಗಿ ಮತ್ತು ಮೂರನೇ ಅಂಶವನ್ನು ಅಂತಿಮ ಆದೇಶದಂತೆ.

**ಪ್ರಾ.ಸಾ–1:**

ಶ್ರೀ ಅಬ್ಬಾಸ್, ಸಹಾಯಕ ಆರಕ್ಷಕ ನಿರೀಕ್ಷಕರು, ಪೂರ್ವ ಠಾಣೆ, ಕದ್ರಿ ಮಂಗಳೂರು ರವರು ದಿನಾಂಕ:20.03.2001ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಇವರು ಪ್ರಕರಣದ ಫಿರ್ಯಾದುದಾರರಾಗಿದ್ದು, ತಮ್ಮ ಸಾಕ್ಷಿಯನ್ನು ನೀಡಿರುತ್ತಾರೆ. ತಾನು ದಿ:1992ರಿಂದ 1998ರವರೆಗೆ ಮುಖ್ಯ ರಕ್ಷಕನಾಗಿ ಪುತ್ತೂರು ಗ್ರಾಮಾಂತರ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸಿದೆ. ದಿನಾಂಕ:29.08.1997ರಂದು ಮಧ್ಯರಾತ್ರಿ ಸಮಯ ಪಿ.ಎಸ್.ಐರವರು ತನ್ನನ್ನು ಮತ್ತು ಎಸ್.ಸಿ. 428 ಪಿ.ಸಿ. 453 ಮತ್ತು ಇತರ ಕೆಲವರನ್ನು ಒಂದು ಕಡೆ ಅಕ್ರಮವಾಗಿ ಮದ್ಯಸಾಗಾಣಿಕೆ ಆಗುತ್ತಿದೆ ಎಂದು ಖಚಿತ ವರ್ತಮಾನ ಬಂದಿದೆ, ಅಲ್ಲಿಗೆ ಹೋಗುವ ಸಲುವಾಗಿ ತನಿಖೆಗೆ ಬೇಕಾದ ಎಲ್ಲಾ ವಸ್ತುಗಳನ್ನು ಸಿದ್ದಪಡಿಸಲು ಹೇಳಿದರು. ತನಿಖೆಗೆ ಬೇಕಾದ ಎಲ್ಲಾ ಸ್ವತ್ತುಗಳೊಂದಿಗೆ ಸಬ್ ಇನ್ಸ್‌ಪೆಕ್ಟರ್ ಜೊತೆಯಲ್ಲಿ ಮಧ್ಯರಾತ್ರಿ ಹೋಗಿ ಪಾಣಾಜೆ ಗ್ರಾಮದ ಮಾರ್ಲಾಪದವು ಬಾಂಬೆಸ್ಕಾಡ್ ಅಂಗಡಿ ಬಳಿ ರಸ್ತೆ ಬಳಿ ಹೊಂಚುಹಾಕುತ್ತಾ ನಿಂತಿದ್ದೆವು. ಹತ್ತಿರದ ಅಂಗಡಿಗಳು ಬಂದ್ ಆಗಿತ್ತು. ರಸ್ತೆ ಬದಿ ವಿದ್ಯುತ್ ದೀಪ ಉರಿಯುತ್ತಿತ್ತು. ಅನೇಕ ವಾಹನಗಳನ್ನು ಚೆಕ್ ಮಾಡಿದೆವು. ಯಾವುದೇ ಅಪರಾಧ ಕಾಣಬರದ ಕಾರಣ ಬಿಟ್ಟೆವು. ಮಧ್ಯರಾತ್ರಿ 3–00 ಗಂಟೆ ಅಂದಾಜಿಗೆ ಪುತ್ತೂರು ಕಡೆಯಿಂದ ಕೇರಳಕ್ಕೆ ಪಾಣಾಜೆ ರಸ್ತೆಯಿಂದಾಗಿ ಒಂದು ಟ್ಯಾಕ್ಸ್ ಜೀಪು ಅತೀ ವೇಗವಾಗಿ ಬರುವುದನ್ನು ಕಂಡು ತಪಾಸಣೆ ಸಲುವಾಗಿ ಅದನ್ನು ನಿಲ್ಲಿಸುವರೇ ಸಮವಸ್ತ್ರದಲ್ಲಿದ್ದ ನಾವು ಸನ್ನೆ ಮಾಡಿದೆವು. ನಮ್ಮ ಸನ್ನೆ ನೋಡಿಯೂ ಚಾಲಕ ವಾಹನ ನಿಲ್ಲಿಸದೇ ಮುಂದೆ ಹೋದ ತಕ್ಷಣ ಅಲ್ಲಿ ಇದ್ದ ಜಯ ಎಂಬುವರ ಖಾಸಗಿ ಜೀಪಿನಲ್ಲಿ ನಾವೆಲ್ಲ ಕುಳಿತು ಆ ವಾಹನ ಬೆನ್ನಟ್ಟಬೇಕೆಂದು ತಿಳಿಸಿದ ಮೇರೆಗೆ ಅವರು ವಾಹನ ಬೆನ್ನಟ್ಟಿಕೊಂಡು ಹೋಗುತ್ತಾ ಅಲ್ಲಿಂದ ಸುಮಾರು ಅರ್ಧ ಕಿ.ಮೀ. ಮುಂದೆ ಪಾಣಾಜೆ ಚೆಕ್ ಪೋಸ್ಟ್ ಬಳಿ ಅದನ್ನು ಬೆನ್ನಟ್ಟಿ ಅದರ ಮುಂದೆ ನಾವಿದ್ದ ವಾಹನ ನಿಲ್ಲಿಸಿ ಆ ವಾಹನವನ್ನು ತಡೆದು ನಿಲ್ಲಿಸಿದ್ದೆವು. ಅದರ ನಂಬರ್ ನೋಡಲಾಗಿ ಕೆಎ–20–ಎಂ–907 ಆಗಿತ್ತು. ಅದರಲ್ಲಿ ಚಾಲಕ ಮತ್ತು ಇನ್ನೊಬ್ಬ ವ್ಯಕ್ತಿ ಇದ್ದನು. ಚಾಲಕನ ಹೆಸರು ಅಲೆಕ್ಸ್ ಓಸ್‌ವಾಲ್ಡ್ ಡೆಮೊಲ್ಲೋ ಮತ್ತು ಪಕ್ಕದ ವ್ಯಕ್ತಿ ಗಣಪತಿ ಭಟ್ ಎಂದು ತಿಳಿಸಿದ. ನಾವು ಸನ್ನೆ ಮಾಡಿದಾಗ ನೀವು ಯಾಕೆ ನಿಲ್ಲಿಸಲಿಲ್ಲವೆಂದು ಕೇಳಿದಾಗ ಅವರು ಸಮರ್ಪಕ ಉತ್ತರ ಕೊಡದ ಕಾರಣ ನಾವು ಅನುಮಾನಗೊಂಡು ಪಂಚರನ್ನಾಗಿ ಕರೆದುಕೊಂಡು ಬರುವರೇ ಪೊಲೀಸ್ ಉಪ ನಿರೀಕ್ಷಕರು ಸಿಬ್ಬಂದಿಯವರಿಗೆ ತಿಳಿಸಿದರು. ಸಿಬ್ಬಂದಿಯವರ ಆಸುಪಾಸಿನಲ್ಲಿ ಹುಡುಕಾಡಿ ಮರಳಿ ಬಂದು ಯಾವುದೇ ಸಾಕ್ಷಿಗಳು ಲಭ್ಯವಿಲ್ಲವೆಂದು ಹೇಳಿದರು. ನಮ್ಮ ಸಮಕ್ಷಮದಲ್ಲಿ ಪೊಲೀಸ್ ನಿರೀಕ್ಷಕರು ಸದರಿ ವಾಹನ ತಪಾಸಣೆ ಮಾಡಲಾಗಿ ಅದರಲ್ಲಿ ಬಿಳಿ ಬಣ್ಣದ 15 ಪ್ಲಾಸ್ಟಿಕ್ ಕ್ಯಾನುಗಳು ಇದ್ದು ಪ್ರತಿಯೊಂದರಲ್ಲೂ 35 ಲೀಟರು ನಷ್ಟು ಮದ್ಯಸಾರ ಇತ್ತು. ಅಲ್ಲದೇ 8 ರಟ್ಟಿನ ಪೆಟ್ಟಿಗೆಗಳಿದ್ದು ಅದನ್ನು ಬಿಡಿಸಿ ನೋಡಲಾಗಿ ಪ್ರತಿಯೊಂದರಲ್ಲೂ 48 ಬಾಟಲಿಗಳಿದ್ದು, ಒಂದೊಂದರಲ್ಲೂ 180 ಎಂಎಲ್ ಇರುವುದು ಕಂಡುಬಂತು. ಅಲ್ಲದೇ 5 ಬ್ಯಾಗ್‌ಗಳಿದ್ದು ಅವುಗಳನ್ನು ಬಿಚ್ಚಿ ನೋಡಲಾಗಿ 4 ಬ್ಯಾಗ್‌ಗಳಲ್ಲಿ ಒಂದೊಂದರಲ್ಲಿ ತಲಾ 300 ರಂತೆ 100 ಎಂಎಲ್ ಹಿಡಿಯುವಂಥ 400 ತೊಟ್ಟೆ ಸಾರಾಯಿ ಇತ್ತು. ಇನ್ನೊಂದರಲ್ಲಿ 100 ಎಂಎಲ್‌ನ ಹಿಡಿಯುವ 200 ತೊಟ್ಟೆ ಶರಾಬು ಇತ್ತು. ಇನ್ನೊಂದರಲ್ಲಿ 100 ಎಂಎಲ್ ಹಿಡಿಯುವ 200 ತೊಟ್ಟೆ ಶರಾಬು ಇತ್ತು. ಮೇಲೆ ಹೇಳಿದ 35 ಪ್ರತಿ ಕ್ಯಾನ್‌ಗಳಿಂದ 180 ಎಂಎಲ್‌ನ ಮಾದರಿ ಮದ್ಯಸಾರ ತೆಗೆದು ಸೀಲ್ ಮಾಡಿ ಬಟ್ಟೆ ಸುತ್ತಿ ಎಸ್.ಹೆಚ್.ಓ. ಸೀಲು ಹಾಕಲಾಯಿತು. 8 ಬಾಕ್ಸ್‌ಗಳಿಂದಲೂ ಸ್ಯಾಂಪಲ್‌ಗಾಗಿ ತೆಗೆದು ಅವುಗಳನ್ನು ಬಟ್ಟೆ ಸುತ್ತಿ ಎಸ್.ಹೆಚ್.ಓ. ಸೀಲು ಮಾಡಲಾಯಿತು. 5 ಪ್ಲಾಸ್ಟಿಕ್ ಬ್ಯಾಗ್‌ಗಳಿಂದ ತಲಾ 2ರಂತೆ ಸಾರಾಯಿ ತೊಟ್ಟೆಗಳನ್ನು ತೆಗೆದು ಬಟ್ಟೆದಾರ ಸುತ್ತಿ ಎಸ್.ಹೆಚ್.ಓ. ಸೀಲು ಮಾಡಲಾಯಿತು. ಈ ಮದ್ಯೆ ಆರೋಪಿಗಳನ್ನು ವಿಚಾರಿಸಲಾಗಿ ಕೇರಳಕ್ಕೆ ಸಾಗಿಸುವುದಾಗಿ ಹೇಳಿದರು. ಈ ಬಗ್ಗೆ ಅವರಲ್ಲಿ ಫರ್ಮಿಟು ರಹದಾರಿ ಪತ್ರ ಇಲ್ಲವೆಂದು ತಿಳಿಸಿದರು. ಮೇಲಿನ ಸ್ವತ್ತುಗಳನ್ನು ಸ್ವಾಧೀನಪಡಿಸಿ, ಆರೋಪಿಗಳನ್ನು ದಸ್ತಗಿರಿ ಮಾಡಿದೆನು. ಸ್ವಾಧೀನಪಡಿಸಿದ 180 ಎಂಎಲ್‌ನ 8 ಬಾಕ್ಸ್‌ಗಳಲ್ಲಿದ್ದ ಫೆನ್ನಿಯ ಬಾಟ್ಲಿಗಳ ಮೇಲೆ ಎ.ಜೆ. ಫೆನ್ನಿ ಎಂದು ಅದರ ವಿಳಾಸ ಬರೆದಿರುತ್ತದೆ. ಸ್ಥಳದಲ್ಲಿ 3 ರಿಂದ 5ರ ತನಕ ಮಹಜರು ಮಾಡಿದೆನು. ವಶಪಡಿಸಿಕೊಂಡ ಸ್ವತ್ತುಗಳ ಮೌಲ್ಯ ರೂ.30,000 ವಾಹನದ ಮೌಲ್ಯ ರೂ.2,000/– ಆರೋಪಿಗಳನ್ನು ಬಂಧಿಸಿ ಸ್ವತ್ತುಗಳೊಂದಿಗೆ ಠಾಣೆಗೆ ಬಂದು ಸ್ವತ್ತು ಸ್ವಾಧೀನ ಕ್ರಮ ಜರುಗಿಸಿದ ಕುರಿತು ವರದಿ ಒಳಗೊಂಡ ಯದಾಸ್ತಿಗೆ ನನ್ನ ರುಜು ಮಾಡಿರುತ್ತೇನೆ. ಅದನ್ನು ಈಗ ನೋಡಿದ್ದು ನಿಶಾನೆ ಪಿ–1 ಎಂದು, ನನ್ನ ಸಹಿಯನ್ನು ನಿಶಾನೆ ಪಿ–1ಎ ಎಂದು ಗುರುತಿಸಲಾಯಿತು. ವಾಹನ ಮತ್ತು ಸ್ವತ್ತುಗಳನ್ನು ನೋಡಿದರೆ ಗುರುತಿಸುತ್ತೇನೆ ಎಂದು ಅಭಿಯೋಗದ ಪರ ಪಿಡಬ್ಲ್ಯೂ–1ರವರು ಪ್ರಕರಣ ದಾಖಲಿಸಿಕೊಂಡು ತನಿಖೆಯನ್ನು ಕೈಗೊಂಡ ಬಗ್ಗೆ ತಮ್ಮ ಸಾಕ್ಷಿಯನ್ನು ನೀಡಿರುತ್ತಾರೆ.

ಅರ್ಜಿದಾರರ ಪರ ವಕೀಲರ ಪಾಟೀ ಸವಾಲಿಗೆ ಉತ್ತರಿಸುತ್ತಾ ಅಬಕಾರಿ ನಿರೀಕ್ಷಕರು ಪುತ್ತೂರು ವಲಯರವರಿಂದ ದೃಢೀಕರಿಸಲ್ಪಟ್ಟ ಪ್ರ.ಮಾ.ವ. ಯ ಜೆರಾಕ್ಸ್ ಪ್ರತಿಯನ್ನು 15ನೇ ಗೆರೆಯಲ್ಲಿ ಸದರಿ ಜೀಪನ್ನು ಬೆಳಿಗ್ಗೆ 5–30 ಗಂಟೆಯಿಂದ ತಪಾಸಣೆ ಮಾಡಿರುವುದು ಎಂದು ಕಂಡುಬರುತ್ತದೆ. ಅದು ಜಜ್ಜಿದಂತೆ ಕಂಡುಬರುತ್ತದೆ. ಆ ಸಮಯವನ್ನು ಮಹಜರಿನ ಕೊನೆಯಲ್ಲಿ ನಿರ್ದಿಷ್ಟ ಸಮಯದಲ್ಲಿ ಬರೆಯಲಾಗಿದೆ, ತಾವು ಠಾಣೆಯಿಂದ ರಾತ್ರಿ 24–00 ಗಂಟೆಗೆ ಹೊರಟಿದ್ದೆವು,

ಮಹಜರಿನಲ್ಲಿ ತೋರಿಸಿದಂತೆ ಖಚಿತ ವರ್ತಮಾನ ಪುತ್ತೂರು ಕಡೆಯಿಂದ ಪಾಣಾಜೆ ರಸ್ತೆಯಾಗಿ ಕೇರಳ ರಾಜ್ಯಕ್ಕೆ ಅಕ್ರಮವಾಗಿ ಸಾರಾಯಿ ಸಾಗಾಣಿಕೆ ನಡೆಯುತ್ತಿದೆಯೆಂಬುದಾಗಿದೆ. ಪುತ್ತೂರಿನಿಂದ ಪಾಣಾಜೆಗೆ ಹೋಗಲು ಎರಡು ದಾರಿ ಇದೆ. ಅಲ್ಲಿ ತಾವು 25 ನಿಮಿಷಕ್ಕೆ ತಲುಪಿದೆವು, ಅಲ್ಲಿಗೆ ಖಾಸಗಿ ವಾಹನದಲ್ಲಿ ಹೋಗಿದ್ದೇವೆ, ಖಾಸಗಿ ವಾಹನ ಜಯ ಎಂಬವರದ್ದು ಆಗಿದೆ, ಆ ಖಾಸಗಿ ವಾಹನ ಬಾಡಿಗೆಗೆ ಗೊತ್ತು ಮಾಡಿದ್ದು ತನಗೆ ತಿಳಿದಿಲ್ಲ, ತಾವು ಪಂಚರು ಸ್ಥಳದಲ್ಲಿ ಸಿಗಬಹುದು ಎಂಬ ಭಾವನೆಯಿಂದ ಹೋದೆವು ಮಧ್ಯರಾತ್ರಿ ಆದ ಕಾರಣ ಯಾರೂ ಸಿಗಲಿಲ್ಲ, ಬೇರೆ ವಾಹನ ತಪಾಸಣೆ ಮಾಡಿದ ವಿಷಯ ಯದಾಸ್ತಿನಲ್ಲಿ ವರದಿಯಲ್ಲಿ ಬರೆಯಲಿಲ್ಲ, ನಾವೆಲ್ಲರೂ ವಾಹನ ನಿಲ್ಲಿಸಲು ಸನ್ನೆ ಮಾಡಿದ್ದೇವೆ, ಸದರಿ ಜೀಪನ್ನು ರಸ್ತೆಯ ಪಕ್ಕದಲ್ಲಿ ರಸ್ತೆಗೆ ಮುಖ ಮಾಡಿ ನಿಲ್ಲಿಸಿದೆವು, ಆ ದಿವಸ ಮಾತ್ರ ಜಯ ಎಂಬುವರ ಖಾಸಗಿ ಜೀಪು ಇತ್ತು. ಬಿಡಲು ಅವರಿಗೆ ಅವಕಾಶವಿರಲಿಲ್ಲ. ಆ ಸ್ಥಳದಿಂದ ಸುಮಾರು 150 ಅಡಿ ದೂರದಲ್ಲಿ ಒಂದು ಐದಾರು ಮನೆಗಳಿವೆ. ಪಂಚರನ್ನು ಕರೆತರಲು ಸಿಬ್ಬಂದಿಯವರನ್ನು ಕಳುಹಿಸಿದ್ದೆ. ತಾವು ಹೋದ ಖಾಸಗಿ ಜೀಪಿನ ಜಯರವರನ್ನು ಪಂಚರನ್ನಾಗಿ ಯಾಕೆ ತೆಗೆದುಕೊಂಡಿರುವುದಿಲ್ಲ ಎಂಬುದು ತಿಳಿದಿಲ್ಲ, ನಿಶಾನೆ ಪಿ–1 ನೋಡಿದೆ. ಅದರಲ್ಲಿ ಅವರ ಸಹಿ ಇಲ್ಲ. ಸದರಿ ಜಯನನ್ನು ಪಂಚರಾಗಿ ಸಹಿ ಪಡೆಯದೇ ಇರುವುದಕ್ಕೆ ಕಾರಣ ನನಗೆ ತಿಳಿದಿಲ್ಲ. ಮತ್ತೆ ಪುನಃ ಬೆಳಗ್ಗೆ 5–30ಕ್ಕೆ ನಾವು ಠಾಣೆಗೆ ಬಂದೆವು. ಆರೋಪಿಗಳನ್ನು ವಿಚಾರಿಸಿದಾಗ ಸದರಿ ಮಾಲನ್ನು ಎಲ್ಲಿಂದ ತಂದದ್ದು, ಯಾರು ಕಳುಹಿಸಿಕೊಟ್ಟದ್ದು ಎಂದು ವಿಚಾರಣೆ ಮಾಡಿದ್ದಾರೆಯೇ ಎನ್ನುವುದು ತನಗೆ ಗೊತ್ತಿಲ್ಲ. ವಾಹನ ಮಾಲೀಕ ಯಾರೆಂದು ಕೇಳಿಲ್ಲ, ಉಪ ನಿರೀಕ್ಷಕರು ಕೇಳಿದ್ದಾರೆಂದರೆ ತನಗೆ ಗೊತ್ತಿಲ್ಲ, ಆ ಸ್ಥಳದ ಬಗ್ಗೆ ನಿಶಾನೆ ಪಿ–1 ನಲ್ಲಿ ಅದರ ಚೆಕ್ ಬಂಧಿ ವಿವರಗಳು ಇರುವುದಿಲ್ಲ. ನಿಶಾನೆ ಪಿ–1ರಲ್ಲಿ ಆ ಸ್ಥಳದಲ್ಲಿ ವಿದ್ಯುತ್ ದೀಪ ಉರಿಯುತ್ತಿತ್ತು ಎಂಬುದನ್ನು ಬರೆದಿರುವುದಿಲ್ಲ. ಆ ಸಮಯ ಎಲ್ಲರೂ ಸಮವಸ್ತ್ರದಲ್ಲಿದ್ದೆವು, ಉಪನಿರೀಕ್ಷಕರು ಸಿಬ್ಬಂದಿಯವರನ್ನು ಪಂಚರನ್ನು ಕರೆದುಕೊಂಡು ಬರಲು ಕಳುಹಿಸಿದರು ಎಂಬ ವಿಷಯ ನಿಶಾನೆ ಪಿ–1ರಲ್ಲಿ ಕಾಣಿಸಿರುವುದಿಲ್ಲ. ಸದರಿ ವಾಹನದಿಂದ ಯಾವುದೇ ಮಾಲನ್ನು ಜಪ್ತಿ ಮಾಡಿಲ್ಲವೆಂದರೆ ಸರಿಯಲ್ಲ, ನಿಶಾನೆ ಪಿ–1ನ್ನು ಠಾಣೆಯಲ್ಲಿ ತಯಾರಿಸಿದ್ದೇನೆಂದರೆ ಸರಿಯಲ್ಲ, ನಾನು ಸುಳ್ಳು ಸಾಕ್ಷಿ ಹೇಳುತ್ತಿದ್ದೇನೆಂದರೆ ಸರಿಯಲ್ಲವೆಂದು ತಮ್ಮ ಸಾಕ್ಷ್ಯವನ್ನು ನುಡಿದಿರುತ್ತಾರೆ.

**ಪ್ರಾ.ಸಾ–2:**

ಶ್ರೀ ಕೆ.ಎನ್. ಆಳ್ವ, ನಿವೃತ್ತ ಅಬಕಾರಿ ನಿರೀಕ್ಷಕರು, ಇವರು ದಿನಾಂಕ:26.03.2008 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಇವರು ಪ್ರಕರಣದ ತನಿಖಾಧಿಕಾರಿಯಾಗಿದ್ದು, ತಮ್ಮ ಸಾಕ್ಷಿಯನ್ನು ನೀಡಿರುತ್ತಾರೆ. ತಾನು ಈ ತಕ್ಷೀರು ನಡೆದ ವರ್ಷದಲ್ಲಿ ಪುತ್ತೂರು ವಲಯದಲ್ಲಿ ಅಬಕಾರಿ ನಿರೀಕ್ಷಕರಾಗಿ ಕೆಲಸ ನಿರ್ವಹಿಸುತ್ತಿದೆ. ಈ ಪ್ರಕರಣದ ಕಡತವನ್ನು ಅಧಿಕೃತ ಅಧಿಕಾರಿಯವರ ಆದೇಶದಂತೆ ಪುತ್ತೂರು ಗ್ರಾಮಾಂತರ ಪೋಲೀಸ್ ಉಪ ನಿರೀಕ್ಷಕರವರಿಂದ ಪಡೆದುಕೊಂಡೆನು. ಈ ಪ್ರಕರಣದ ಮಾದರಿ ಸೀಸೆಗಳಾದ ರಕ್ಟಿಫೈಡ್ ಸ್ಪಿರಿಟ್‌ನಿಂದ 180 ಎಂಎಲ್ ನ 8 ಬಾಟ್ಲಿಗಳನ್ನು ಫೆನ್ನಿ 180 ಎಂಎಲ್ ಹಾಗೂ ಸಾರಾಯಿ ಸ್ಯಾಚೇಟು 5, ಇವರುಗಳನ್ನು ದಿನಾಂಕ:17.10.1997ರಂದು ರಾಸಾಯನಿಕ ತಜ್ಞರು ಮಂಗಳೂರು ಇವರಿಗೆ ಅಬಕಾರಿ ರಕ್ಷಕರಾದ ಚಂದ್ರಶೇಖರ್ ಇವರ ಮೂಲಕ ಕಳುಹಿಸಿರುತ್ತೇನೆ. ದಿನಾಂಕ:28.10.1997 ರಂದು ರಸಾಯನಿಕ ತಜ್ಞರು ಪರೀಕ್ಷಿಸಿದ ಸದರಿ ಮಾದರಿ ಬಾಟಲಿಗಳನ್ನು ಹಾಗೂ ಸ್ಯಾಚೇಟುಗಳನ್ನು ಮತ್ತು ವರದಿಯನ್ನು ಅಬಕಾರಿ ರಕ್ಷಕ ಚಂದ್ರಶೇಖರ್ ಇವರ ಮುಖಾಂತರ ಪಡೆದುಕೊಂಡೆನು. ಈ ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನ ಟೆಂಪೋಟ್ರಾಕ್ಸ್ ಸಂಖ್ಯೆ: ಕೆಎ–20–ಎಂ–907, 35 ಲೀ ರೆಕ್ಟಿಫೈಡ್ ಸ್ಪಿರಿಟ್ ತುಂಬಿದ 15 ಪ್ಲಾಸ್ಟಿಕ್ ಕ್ಯಾನುಗಳು ಹಾಗೂ 5 ಪಾಲಿಥೀನ್ ಚೀಲದಲ್ಲಿ ತುಂಬಿರುವ ಸಾರಾಯಿ ಮತ್ತು 180 ಎಂಎಲ್‌ನ 45 ಫೆನ್ನಿ ಬಾಟಲಿಗಳು ಇವುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವಂತೆ ಕೋರಿ ದಿನಾಂಕ:14.11.1997 ರಂದು ಅಧಿಕೃತ ಅಧಿಕಾರಿಯವರಿಗೆ ವರದಿಯನ್ನು ಸಲ್ಲಿಸಿದೆನು. ಈ ಪ್ರಕರಣಕ್ಕೆ ಸಂಬಂಧಿಸಿದ ಪ್ರಥಮ ವರ್ತಮಾನ ವರದಿ ಅದನ್ನು ನಿಶಾನೆ ಪಿ–2 ಎಂದೂ ಗುರುತಿಸಲಾಯಿತು. ಮಾದರಿ ಸೀಲನ್ನು ನಿಶಾನೆ ಪಿ–3 ಎಂದೂ ಗುರುತಿಸಲಾಯಿತು. ಅಬಕಾರಿ ನಿರೀಕ್ಷಕರು, ಪುತ್ತೂರು ವಲಯ ಇವರು ದಿನಾಂಕ:14.11.1997 ರಂದು ಅಧಿಕೃತ ಅಧಿಕಾರಿಗಳಿಗೆ ಸಲ್ಲಿಸಿದ ವರದಿಯನ್ನು ನಿಶಾನೆ ಪಿ–4 ಎಂದೂ ಗುರುತಿಸಲಾಯಿತು. ರಾಸಾಯನಿಕ ತಜ್ಞರ ವರದಿಯನ್ನು ನಿಶಾನೆ ಪಿ–5 ಎಂದೂ ಗುರುತಿಸಲಾಯಿತು ಎಂದು ಅಭಿಯೋಗದ ಪರ ಪಿಡಬ್ಲ್ಯೂ–2 ರವರು ತಮ್ಮ ಸಾಕ್ಷಿಯನ್ನು ನೀಡಿರುತ್ತಾರೆ.

**ಪಾಟೀ ಸವಾಲು:** ಮಾಲೀಕರ ಪರ ವಕೀಲರು ಹಾಜರು ಇರುವುದಿಲ್ಲ.

ಈ ಪ್ರಕರಣದ ಫಿರ್ಯಾದುದಾರರು ಹಾಗೂ ತನಿಖಾಧಿಕಾರಿಯವರು ಪ್ರಕರಣಕ್ಕೆ ಪೂರಕವಾಗಿ ನೀಡಿರುವ ಸಾಕ್ಷ್ಯಾಧಾರಗಳ ಆಧಾರದಲ್ಲಿ ಹಾಗೂ ಪ್ರಾಧಿಕಾರದಲ್ಲಿ ಲಭ್ಯವಿರುವ ದಾಖಲಾತಿಗಳ ಪ್ರಕಾರ ದಿನಾಂಕ:29.08.1997ರಂದು ಟ್ರಾಕ್ಸ್ ಜೀಪು ಸಂಖ್ಯೆ: ಕೆಎ–20–ಎಂ–907ರಲ್ಲಿ ಅಕ್ರಮವಾಗಿ ಯಾವುದೇ ರಹದಾರಿ ಪತ್ರವಿಲ್ಲದೇ ಆರೋಪಿಗಳು ಮದ್ಯಸಾರ, ಫೆನ್ನಿ ಮತ್ತು ಸಾರಾಯಿ ಸ್ಯಾಚೇಟುಗಳನ್ನು ಹೊಂದಿ ಸಾಗಾಟ ಮಾಡುತ್ತಿರುವುದನ್ನು ಪತ್ತೆಹಚ್ಚಿ, ಪೋಲೀಸ್ ಉಪ ನಿರೀಕ್ಷಕರು, ಪುತ್ತೂರು ಗ್ರಾಮಾಂತರ ಪೋಲೀಸ್ ಠಾಣೆ, ಪುತ್ತೂರು ಇವರ ಪ್ರಮಾವ ಸಂಖ್ಯೆ:99/1997, ದಿನಾಂಕ:29.08.1997 ರಂತೆ ಪ್ರಕರಣ ದಾಖಲಿಸಿಕೊಂಡಿರುವುದು ಹಾಗೂ ವಾಹನದಲ್ಲಿ ಜಪ್ತು ಮಾಡಲ್ಪಟ್ಟಿರುವ ವಸ್ತು ರಾಸಾಯನಿಕ ತಜ್ಞರ ವರದಿಯಂತೆ

ಮದ್ಯಸಾರ, ಫೆನ್ನಿ ಮತ್ತು ಸಾರಾಯಿಯಾಗಿದ್ದು, ಸದರಿ ವಾಹನವನ್ನು ಕರ್ನಾಟಕ ಅಬಕಾರಿ ಕಾನೂನಿನ ಉಲ್ಲಂಘನೆಗಾಗಿ ಬಳಸಿರುವುದು ಸ್ಪಷ್ಟವಾಗಿ ಸಾಭೀತಾಗಿರುವುದರಿಂದ ಒಂದನೇ ಅಂಶವನ್ನು ಗುಣಾತ್ಮಕವಾಗಿ ಪರಿಗಣಿಸಲಾಗಿರುತ್ತದೆ.

ಇಂತಹ ಅಕ್ರಮ ಮದ್ಯಸಾರ, ಫೆನ್ನಿ ಮತ್ತು ಸಾರಾಯಿ ತನ್ನ ತಿಳುವಳಿಕೆಗೆ ಬಾರದೇ ನಡೆದಿದೆ ಎಂಬುದನ್ನು ಸಾಕ್ಷ್ಯಾಧಾರಗಳೊಂದಿಗೆ ಸಾಭೀತುಪಡಿಸುವುದು ವಾಹನದ ಮಾಲೀಕರ ಆದ್ಯ ಹೊಣೆಗಾರಿಕೆಯಾಗಿರುತ್ತದೆ. ಆದರೆ ಈ ಪ್ರಕರಣದ ವಾಹನ ಮಾಲೀಕರಾದ ಶ್ರೀ ರಮೇಶ್ ಕೋಟ್ಯಾನ್ ಇವರಿಗೆ ಹಲವಾರು ಬಾರಿ ನೋಟೀಸು ನೀಡಿದ್ದರೂ ಅವರ ಪರ ವಕೀಲರಾಗಲೀ ಈ ಪ್ರಾಧಿಕಾರದ ಮುಂದೆ ಹಾಜರಾಗಿರುವುದಿಲ್ಲ. ಪ್ರತಿರಕ್ಷಾ ಸಾಕ್ಷಿ ವಿಚಾರಣೆ ಮಾಡಲು ಅರ್ಜಿದಾರರಿಗೆ ಹಾಗೂ ಅವರ ಪರ ವಕೀಲರಿಗೆ ಪ್ರತಿರಕ್ಷಾ ಸಾಕ್ಷಿಯನ್ನು ಹಾಜರುಪಡಿಸಲು ಹಲವಾರು ಬಾರಿ ಸಮಯಾವಕಾಶವನ್ನು ನೀಡಿದರೂ ಅರ್ಜಿದಾರರು ಹಾಗೂ ಅವರ ಪರ ವಕೀಲರು ಈ ಪ್ರಾಧಿಕಾರದ ಮುಂದೆ ಪ್ರತಿರಕ್ಷಾ ಸಾಕ್ಷಿಯನ್ನು ವಿಚಾರಣೆಗೆ ಹಾಜರುಪಡಿಸಲು ವಿಫಲರಾಗಿರುತ್ತಾರೆ. ಅಲ್ಲದೇ ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸಾಕ್ಷ್ಯಾಧಾರಗಳೊಂದಿಗೆ ವಾಹನವನ್ನು ತನ್ನ ತಿಳುವಳಿಕೆಗೆ ಬಾರದೇ ಅಕ್ರಮ ಸಾಗಾಣಿಕೆಗೆ ಉಪಯೋಗಿಸಲಾಗಿದೆ ಎಂದು ರುಜುವಾತುಪಡಿಸಲು ವಿಫಲರಾಗಿರುವುದರಿಂದ ಹಾಗೂ ಈ ಪ್ರಾಧಿಕಾರದ ಮುಂದೆ ಹಾಜರಾಗದೇ ಇರುವುದನ್ನು ಗಮನಿಸಿದಾಗ ವಾಹನ ಮಾಲೀಕರು ತನ್ನ ತಿಳುವಳಿಕೆಯಿಂದಲೇ ವಾಹನವನ್ನು ಅಕ್ರಮ ಸಾಗಾಣಿಕೆಗೆ ತೊಡಗಿಸಿರುವುದು ನಿಸ್ಸಂದೇಹವಾಗಿ ಸಾಭೀತಾಗಿರುತ್ತದೆ. ಈ ಮೇಲಿನ ಕಾರಣಗಳಿಂದ ಎರಡನೇ ಅಂಶವನ್ನು ನಕಾರಾತ್ಮಕವಾಗಿ ಪರಿಗಣಿಸಿದೆ.

ಮೇಲಿನ ಎಲ್ಲಾ ಕಾರಣಗಳಿಂದ ಹಾಗೂ ಲಭ್ಯವಿರುವ ದಾಖಲಾತಿಗಳಿಂದ ಈ ಪ್ರಕರಣದಲ್ಲಿ ಜಪ್ತು ಪಡಿಸಲಾಗಿರುವ ವಾಹನ ಟ್ರಾಕ್ಸ್ ಜೀಪು ಸಂಖ್ಯೆ: ಕೆಎ–20–ಎಂ–907ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿ ಪ್ರಾಧಿಕಾರವು ತೀರ್ಮಾನಿಸಿ, ಈ ಪ್ರಕರಣದಲ್ಲಿ ಜಪ್ತು ಪಡಿಸಲಾಗಿರುವ ವಾಹನ ಸಂಖ್ಯೆ: ಕೆಎ–20–ಎಂ–907ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

ನೂರ್ ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಕಾಯಿದೆ 1965ನೇ ಕಾಲಂ 43(ಎ) ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ನಿಯಮ 43(ಬಿ) ರಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ ಪೊಲೀಸ್ ಉಪ ನಿರೀಕ್ಷಕರು, ಪುತ್ತೂರು ಗ್ರಾಮಾಂತರ ಪೊಲೀಸ್ ಠಾಣೆ, ಪುತ್ತೂರು ಇವರ ತಕ್ಷೀರು ಸಂಖ್ಯೆ: 99/1997 ದಿನಾಂಕ:29.08.1997ರಲ್ಲಿ ಜಪ್ತು ಪಡಿಸಿಕೊಂಡಿರುವ ಟ್ರಾಕ್ಸ್ ಜೀಪು ಸಂಖ್ಯೆ: ಕೆಎ–20–ಎಂ–907 (ಚಾಸೀಸ್ ನಂ.TX 907847 ಮತ್ತು ಇಂಜಿನ್ ನಂ.616969070670) ನ್ನು ನಿಯಮ 43ಎ (2) ರನ್ವಯ ಕರ್ನಾಟಕ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಪ್ರಾಧಿಕಾರದಿಂದ ದಿನಾಂಕ:27.03.1998ರಂದು ವಾಹನ ಬಿಡುಗಡೆಗೊಳಿಸಿ, ತಾತ್ಕಾಲಿಕವಾಗಿ ಮಧ್ಯಂತರ ಬಿಡುಗಡೆ ಆದೇಶವನ್ನು ರದ್ದುಗೊಳಿಸಿ ಆದೇಶಿಸಿದೆ. ಆರ್.ಸಿ. ಮಾಲೀಕರು ಸದರಿ ಮಧ್ಯಂತರ ಬಿಡುಗಡೆ ಹೊಂದಿರುವ ಟೆಂಪೋ ಟ್ರಾಕ್ಸ್ ಜೀಪು ಸಂಖ್ಯೆ: ಕೆಎ–20–ಎಂ–907 ನ್ನು ಈ ಪ್ರಾಧಿಕಾರಕ್ಕೆ ಈ ಆದೇಶದ 30 ದಿನಗಳ ಒಳಗೆ ಒಪ್ಪಿಸಲು ಆದೇಶಿಸಿದೆ. ತಪ್ಪಿದ್ದಲ್ಲಿ ಭದ್ರತೆಗಾಗಿ ನೀಡಿರುವ ಇಂಡೆಮ್ನಿಟಿ ಬಾಂಡ್ ಹಾಗೂ ಸ್ವಾಲ್ವೆಂಟಿ ಶ್ಯೂರಿಟಿಯನ್ನು ಏಕಪಕ್ಷೀಯವಾಗಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಆದೇಶಿಸಿದೆ.

ಈ ಆದೇಶವನ್ನು ದಿನಾಂಕ:27.02.2009ರಂದು ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿವಸಗಳ ನಂತರ ಜಾರಿಯಲ್ಲಿ ಬರುತ್ತದೆ.

**ನೂರ್ ಮಹಮ್ಮದ್ ಹುಸೇನ್**
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್
ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅನುಬಂಧ–I**

ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ

ಪ್ರಾ.ಸಾ.–1–ಶ್ರೀ ಅಬ್ಬಾಸ್, ಸಹಾಯಕ ಪೊಲೀಸ್ ನಿರೀಕ್ಷಕರು, ಕದ್ರಿ ಪೊಲೀಸ್ ಠಾಣೆ, ಮಂಗಳೂರು.

ಪ್ರಾ.ಸಾ–2 : ಶ್ರೀ ಕೆ.ಎನ್. ಆಳ್ವ, ನಿವೃತ್ತ ಅಬಕಾರಿ ನಿರೀಕ್ಷಕರು.

**ಅನುಬಂಧ–II**

**ಫಿರ್ಯಾದುದಾರರ ಪರ ಮಂಡಿಸಲಾದ ದಾಖಲಾತಿಗಳು**

ನಿಶಾನೆ–1: ಯಾದಾಸ್ತಿನ ಪ್ರತಿ

ನಿಶಾನೆ–1ಎ: ಯಾದಾಸ್ತಿನ ಮೇಲಿನ ಸಹಿ

ನಿಶಾನೆ–2: ಪ್ರಥಮ ವರ್ತಮಾನ ವರದಿ

ನಿಶಾನೆ–3: ಮಾದರಿ ಸೀಲು
ನಿಶಾನೆ–4: ಅಬಕಾರಿ ನಿರೀಕ್ಷಕರು ಪುತ್ತೂರು ವಲಯರವರ ದಿ:17.11.1997 ರಂದು ಸಲ್ಲಿಸಿದ ತನಿಖಾ ವರದಿ.
ನಿಶಾನೆ–5: ರಸಾಯನಿಕ ವಿಶ್ಲೇಷಣಾ ವರದಿ ಪ್ರತಿ.

**ಅನುಬಂಧ– III**

ವಾಹನ ಮಾಲೀಕರ ಪರವಾಗಿ ವಿಚಾರಣೆ ಮಾಡಲಾದ ಸಾಕ್ಷಿದಾರರು:
ಅರ್ಜಿದಾರರ ಹೇಳಿಕೆ: – ಯಾವುದು ಇಲ್ಲ–

**ಅನುಬಂಧ– IV**

ವಾಹನ ಮಾಲೀಕರ ಪರವಾಗಿ ಗುರುತಿಸಲಾದ ದಾಖಲೆಗಳು: –ಯಾವುದು ಇಲ್ಲ–

**ನೂರ್ ಮಹಮ್ಮದ್ ಹುಸೇನ್**
ಪಿ.ಆರ್.251 ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್
ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು ನಿರ್ದೇಶಕರ ನಡವಳಿ**
**ಸಂಖ್ಯೆ: ಗಭೂಇ/ಡಿಸಿಬಿ/ಕಗಗು625/09–10/164, ದಿನಾಂಕ:9ನೇ ಏಪ್ರಿಲ್, 2009**

**ವಿಷಯ:** ತುಮಕೂರು ಜಿಲ್ಲೆ, ತುಮಕೂರು ತಾಲ್ಲೂಕು, ನಂದಿಹಳ್ಳಿ ಗ್ರಾಮದ ಸರ್ವೆ ನಂ.42ರಲ್ಲಿ 0.22 ಎಕರೆ ಪ್ರದೇಶದಲ್ಲಿ ಪಿಂಕ್ ಪಾರ್ಫರಿ ಶಿಲೆಗಾಗಿ ಮೆ: ಅಭಿನಯ ಟ್ರೇಡಿಂಗ್ ಕಾರ್ಪೋರೇಷನ್ ರವರಿಗೆ ಮಂಜೂರಾಗಿದ್ದ ಕಲ್ಲುಗಣಿಗುತ್ತಿಗೆ ಸಂಖ್ಯೆ: 625ರ ಗುತ್ತಿಗೆಯನ್ನು ಪುನರ್ ಸ್ಥಾಪಿಸಿರುವ ಬಗ್ಗೆ.

**ಉಲ್ಲೇಖ:** 1) ನಿರ್ದೇಶಕರ ಕಛೇರಿ ನಡವಳಿ ಆದೇಶ ಸಂಖ್ಯೆ: ಗಭೂಇ/ಡಿಸಿಬಿ/ ಕಗಗು–625/06–07/11990–98/ ದಿನಾಂಕ:11.01.2007.
2) ಸರ್ಕಾರದ ನಡವಳಿ ಆದೇಶ ಸಂಖ್ಯೆ: ಸಿಐ 43/ಎಂಎಂಎನ್ 2007 ದಿನಾಂಕ:26.05.2007.
3) ಸರ್ಕಾರದ ನಡವಳಿ ಆದೇಶ ಸಂಖ್ಯೆ: ಸಿಐ 203 ಎಂಆರ್‌ಸಿ 2007 ದಿನಾಂಕ:05.03.2009.

**ಪ್ರಸ್ತಾವನೆ:**

ತುಮಕೂರು ಜಿಲ್ಲೆ ತುಮಕೂರು ತಾಲ್ಲೂಕು ನಂದಿಹಳ್ಳಿ ಗ್ರಾಮದ ಸರ್ವೆ ನಂ.42ರಲ್ಲಿ 0.22 ಎಕರೆ ವಿಸ್ತೀರ್ಣದಲ್ಲಿ ಪಿಂಕ್ ಪಾರ್ಫರಿ ಅಲಂಕಾರಿಕೆ ಶಿಲೆಗಾಗಿ ಕಲ್ಲುಗಣಿಗುತ್ತಿಗೆ ಸಂಖ್ಯೆ: 625ರ ಗುತ್ತಿಗೆಯನ್ನು ಮೆ: ಅಭಿನಯ ಟ್ರೇಡಿಂಗ್ ಕಾರ್ಪೋರೇಷನ್‌ರವರ ಹೆಸರಿನಲ್ಲಿ ದಿನಾಂಕ:29.01.2004 ರಿಂದ 10 ವರ್ಷಗಳಿಗಾಗಿ ಮಂಜೂರು ಮಾಡಲಾಗಿತ್ತು. ಗುತ್ತಿಗೆದಾರರು ಗುತ್ತಿಗೆ ಮೇಲಿನ ಬಾಕಿಯನ್ನು ಪಾವತಿಸದೆ ಗುತ್ತಿಗೆಯನ್ನು ನಿಷ್ಕ್ರಿಯವಾಗಿರಿಸಿದ ಕಾರಣ ದಿನಾಂಕ:11.01.2007 ರಿಂದ ಜಾರಿಗೆ ಬರುವಂತೆ ನಿರ್ದೇಶಕರಿಗೆ ಪ್ರತ್ಯೋಜಿಸಿರುವ ಅಧಿಕಾರದ ಅಡಿಯಲ್ಲಿ ಗುತ್ತಿಗೆಯನ್ನು ರದ್ದುಗೊಳಿಸಲಾಗಿತ್ತು.

ಅದರಂತೆ ಗುತ್ತಿಗೆದಾರರು ಪರಿಷ್ಕರಣ ಅರ್ಜಿಯನ್ನು ನಿಯಮ 53(2)ರ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರಂತೆ ಸರ್ಕಾರಕ್ಕೆ ಸಲ್ಲಿಸಿದ್ದು ಸರ್ಕಾರವು ಉಲ್ಲೇಖ 2ರ ತನ್ನ ಆದೇಶದಲ್ಲಿ ನಿರ್ದೇಶಕರ ಕ್ರಮವನ್ನು ಸ್ಥಿರೀಕರಿಸಿತು. ತತ್ಸಂಬಂಧ ಅರ್ಜಿದಾರರು ನಿರ್ದೇಶಕರ ಆದೇಶ ಹಾಗೂ ಸರ್ಕಾರದ ಆದೇಶ ಸಂಖ್ಯೆ: ಸಿಐ 43 ಎಂಎಂಎನ್ 2007 ದಿನಾಂಕ:26.05.2007ರ ವಿರುದ್ಧ ಮಾನ್ಯ ಉಚ್ಛ ನ್ಯಾಯಾಲಯದಲ್ಲಿ ರಿಟ್ ಅರ್ಜಿ ಸಂಖ್ಯೆ: 11240/2007 ಅನ್ನು ದಾಖಲಿಸಿರುತ್ತಾರೆ. ಮಾನ್ಯ ಉಚ್ಛ ನ್ಯಾಯಾಲಯವು 13.08.2008ರ ತನ್ನ ಆದೇಶದಲ್ಲಿ, ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ ಇವರ ದಿನಾಂಕ:11.01.2007ರ ಆದೇಶ ಮತ್ತು ಸರ್ಕಾರದ ನಡವಳಿ ಆದೇಶ ದಿನಾಂಕ:26.05.2007 ಅನ್ನು ವಜಾಗೊಳಿಸಿ ಅರ್ಜಿದಾರರ ಅರ್ಜಿಯನ್ನು ಪುರಸ್ಕರಿಸಿ, ಅರ್ಜಿದಾರರ ಮನವಿಯನ್ನು ನಿಯಮಗಳನುಸಾರ ಪುನರ್ ಪರಿಶೀಲಿಸಲು ಪರಿಷ್ಕರಣಾ ಪ್ರಾಧಿಕಾರಕ್ಕೆ ಹಿಂದಿರುಗಿಸಿರುತ್ತಾರೆ. ಪರಿಷ್ಕರಣ ಪ್ರಾಧಿಕಾರವಾದ ಸರ್ಕಾರವು ಉಲ್ಲೇಖ (3)ರ ನಡವಳಿಯಲ್ಲಿ ಮೆ: ಅಭಿನಯ ಟ್ರೇಡಿಂಗ್ ಕಾರ್ಪೋರೇಷನ್‌ರವರ ಪರಿಷ್ಕರಣ ಅರ್ಜಿಯನ್ನು ಮಾನ್ಯ ಉಚ್ಛ ನ್ಯಾಯಾಲಯದ ನಿರ್ದೇಶನದಂತೆ ಪುನರ್ ಪರಿಶೀಲಿಸಿ, ಕಲ್ಲುಗಣಿಗುತ್ತಿಗೆದಾರರು ನಿಯಮಾನುಸಾರ ವಿಧಿಸಿರುವ ನಿಬಂಧನೆಗಳನ್ನು ಪಾಲಿಸುವ ಷರತ್ತಿಗೊಳಪಡಿಸಿ ಕಲ್ಲುಗಣಿಗುತ್ತಿಗೆ ಸಂಖ್ಯೆ:625 ಅನ್ನು ಗುತ್ತಿಗೆ ಅವಧಿ ಅಂತ್ಯದವರೆವಿಗೆ ಮರು ಸ್ಥಾಪಿಸಿ ಆದೇಶಿಸಲಾಗಿದೆ.

ಕಲ್ಲುಗಣಿಗುತ್ತಿಗೆದಾರರು 2006–07ನೇ ಸಾಲಿನ ಅಂತ್ಯದವರೆವಿಗೆ ಬಾಕಿ ಇದ್ದ ಹಣ, ಬಡ್ಡಿ ಮತ್ತು ದಂಡವನ್ನು ಸರ್ಕಾರಕ್ಕೆ ಪಾವತಿಸಿರುವ ಮೇರೆಗೆ ಅವರ ಕಲ್ಲುಗಣಿಗುತ್ತಿಗೆ ಸಂಖ್ಯೆ:625 ಅನ್ನು ಸರ್ಕಾರವು ಮರುಸ್ಥಾಪಿಸಿರುವ ಮೇರೆಗೆ ಈಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ: ಡಿಸಿಬಿ/ಕಗಗು–625/2009–10, ದಿನಾಂಕ:**

ಗಣಿ ಮತು ಭೂವಿಜ್ಞಾನ ಇಲಾಖೆಯ ನಿರ್ದೇಶಕರಿಗೆ ಸರ್ಕಾರದ ನಡವಳಿಯಲ್ಲಿ ನಿರ್ದೇಶಿಸಿರುವಂತೆ ತುಮಕೂರು ಜಿಲ್ಲೆ ತುಮಕೂರು ತಾಲ್ಲೂಕು, ನಂದಿಹಳ್ಳಿ ಗ್ರಾಮದ ಸರ್ವೆ ನಂ.42ರಲ್ಲಿ 0.22 ಎಕರೆ ವಿಸ್ತೀರ್ಣದಲ್ಲಿ ಅಲಂಕಾರಿಕ ಶಿಲೆಗಾಗಿ ಮೆ: ಅಭಿನಯ ಟ್ರೇಡಿಂಗ್ ಕಾರ್ಪೋರೇಷನ್‌ರವರ ಹೆಸರಿನಲ್ಲಿ ಮಂಜೂರಾಗಿದ್ದ ಕಲ್ಲುಗಣಿಗುತ್ತಿಗೆ ಸಂಖ್ಯೆ: 625 ಅನ್ನು

ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮಗಳ ಷರತ್ತಿಗೆ ಒಳಪಡಿಸಿ ಕಲ್ಲುಗಣಿಗುತ್ತಿಗೆ ಅವಧಿ ಹಾಗೂ ಇನ್ನಿತರ ಷರತ್ತಿನಂತೆ ಗುತ್ತಿಗೆಯನ್ನು ಪುನರ್ ಸ್ಥಾಪಿಸಲಾಗಿದೆ.

ನಿರ್ದೇಶಕರು,
ಪಿ.ಆರ್.363 ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು.

**ಆಯುಕ್ತರು, ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆ, ಬೆಂಗಳೂರು ಇವರ ನಡವಳಿ ಸಂಖ್ಯೆ: ಸಿಬ್ಬಂದಿ.ಶಿಸ್ತು.ಅಗೈಹಾ.7/2000–2001, ದಿನಾಂಕ:23ನೇ ಮಾರ್ಚ್, 2009**

**ವಿಷಯ:**ಶ್ರೀ ಆನಂದ್‌ನಾಯಕ ದ್ವಿತೀಯ ದರ್ಜೆ ಭೂಮಾಪಕರು ಇವರು ಭೂದಾಖಲೆಗಳ ಸಹಾಯಕ ನಿರ್ದೇಶಕರು, ಪುತ್ತೂರು ಕಛೇರಿಯಲ್ಲಿ ಅನಧಿಕೃತ ಗೈರು ಹಾಜರಿ ಬಗ್ಗೆ ಶಿಸ್ತು ಕ್ರಮ–ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಉಲ್ಲೇಖ:**1) ಈ ಕಛೇರಿಯ ಸಮಸಂಖ್ಯೆಯ ಕಾರಣ ಕೇಳಿ ನೋಟೀಸು ದಿನಾಂಕ:08.02.2007.
2) ವಿಚಾರಣಾಧಿಕಾರಿಗಳನ್ನು ನೇಮಕ ಮಾಡಿದ ಈ ಕಛೇರಿಯ ಸಮಸಂಖ್ಯೆ ನಡವಳಿ ದಿನಾಂಕ:04/08.08.2007.
3) ವಿಚಾರಣಾಧಿಕಾರಿಗಳ ವರದಿ ಸಂಖ್ಯೆ: ಸಿಬ್ಬಂದಿ:ಶಿಸ್ತು:36/07–08/2814, ದಿನಾಂಕ:11.07.2008.
4) ಈ ಕಛೇರಿಯ ಸಮಸಂಖ್ಯೆಯ 2ನೇ ಕಾರಣ ಕೇಳಿ ನೋಟೀಸು ದಿನಾಂಕ:18.09.2008.

**ಪ್ರಸ್ತಾವನೆ:**

ಶ್ರೀ ಆನಂದ್‌ನಾಯಕ್, ದ್ವಿತೀಯ ದರ್ಜೆ ಭೂಮಾಪಕರು ಇವರು ಈ ಹಿಂದೆ ಭೂದಾಖಲೆಗಳ ಸಹಾಯಕ ನಿರ್ದೇಶಕರು, ಪುತ್ತೂರು ಕಛೇರಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಸದರಿಯವರು ದಿನಾಂಕ:01.08.2002 ರಿಂದ 07.05.2005 ರವರೆಗೆ ಯಾವುದೇ ರಜೆ ಅರ್ಜಿಯನ್ನು ಸಲ್ಲಿಸದೆ, ಸಕ್ಷಮ ಪ್ರಾಧಿಕಾರಿಯಿಂದ ಪೂರ್ವಾನುಮತಿಯನ್ನು ಪಡೆಯದೆ ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಾಗಿರುವ (ಇಲಾಖೆಯು ಕಂದಾಯ ಇಲಾಖೆಯೊಡನೆ ಕಾರ್ಯವಿಲೀನವಾದ ನಂತರ ತಹಶೀಲ್ದಾರ, ಪುತ್ತೂರು ಕಛೇರಿಯಾಗಿದ್ದು, ನೌಕರರು ಗೈರು ಹಾಜರಿಯಲ್ಲಿ ಮುಂದುವರೆದ ಕಾರಣ, ಯಾವುದೇ ಕಛೇರಿಗೆ ಸ್ಥಳ ನಿಯುಕ್ತಿಗೊಂಡಿರುವುದಿಲ್ಲ) ಬಗ್ಗೆ ಈ ಕಛೇರಿಯಿಂದ ಕಾರಣ ಕೇಳಿ ನೋಟೀಸನ್ನು ಆರೋಪ ಪಟ್ಟಿಯೊಂದಿಗೆ ದಿನಾಂಕ:08.02.2007 ರಂದು ಜಾರಿ ಮಾಡಲಾಗಿರುತ್ತದೆ. ನೌಕರರ ವಿರುದ್ಧ ಮಾಡಲಾದ ಆರೋಪಗಳನ್ನು ಈ ಕೆಳಕಂಡಂತೆ ಪುನರುಚ್ಚರಿಸಿದೆ. (ಸದರಿ ನೌಕರರನ್ನು ಇನ್ನು ಮುಂದೆ ಆಪಾದಿತ ನೌಕರರೆಂದು ಕರೆಯಲಾಗಿದೆ.)

**ಆರೋಪ:**

ಶ್ರೀ ಆನಂದ್‌ನಾಯಕ್, ದ್ವಿತೀಯ ದರ್ಜೆ ಭೂಮಾಪಕರು ಆದ ನೀವು ಈ ಹಿಂದೆ ಭೂದಾಖಲೆಗಳ ಸಹಾಯಕ ನಿರ್ದೇಶಕರು, ಪುತ್ತೂರು ಕಛೇರಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ (ಕಂದಾಯ ಇಲಾಖೆಯೊಡನೆ ವಿಲೀನವಾದ ನಂತರ ತಹಶೀಲ್ದಾರ್, ಪುತ್ತೂರು ಕಛೇರಿ ಹಾಗೂ ಗೈರು ಹಾಜರಿಯಲ್ಲಿ ಮುಂದುವರೆದಿರುವ ಕಾರಣ ಯಾವುದೇ ಕಛೇರಿಗೆ ಸ್ಥಳ ನಿಯುಕ್ತಿಗೊಂಡಿರುವುದಿಲ್ಲ) ದಿನಾಂಕ:01.08.2002 ರಿಂದ ದಿನಾಂಕ:07.05.2005 ರವರೆಗೆ ಯಾವುದೇ ರಜೆ ಅರ್ಜಿಯನ್ನು ಸಲ್ಲಿಸದೆ, ಸಕ್ಷಮ ಪ್ರಾಧಿಕಾರಿಯವರಿಂದ ಪೂರ್ವಾನುಮತಿ ಪಡೆಯದೆ ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಾಗುವ ಮೂಲಕ ಕಛೇರಿಯ ಕೆಲಸಕ್ಕೆ ತೊಂದರೆಯುಂಟು ಮಾಡಿರುತ್ತೀರಿ. ಇದರಿಂದ ಕರ್ನಾಟಕ ಸರ್ಕಾರಿ ಸೇವಾ ನಿಯಮಾವಳಿ 1958ರ ನಿಯಮ 106(ಎ) ಮತ್ತು ನಿಯಮ 108 ಅನ್ನು ಉಲ್ಲಂಘಿಸಿದಂತಾಗಿ ದುರ್ನಡತೆ ಎಸಗಿರುತ್ತೀರಿ. ಆ ಕಾರಣ, ಕರ್ನಾಟಕ ಸರ್ಕಾರಿ ಸೇವಾ (ನಡತೆ) ನಿಯಮಾವಳಿ 1966ರ ನಿಯಮ 3(i),(ii) ಮತ್ತು (iii) ಅನ್ನು ಉಲ್ಲಂಘಿಸಿ ಕರ್ನಾಟಕ ಸರ್ಕಾರಿ ಸೇವಾ (ಸಿ.ಸಿ.ಎ.) 1957 ರನ್ವಯ ಶಿಸ್ತು ಕ್ರಮ ಜರುಗಿಸಲು ಅನುವು ಮಾಡಿ ಕೊಟ್ಟಿರುತ್ತೀರಿ. ಆದ ಕಾರಣ ಈ ಆರೋಪ.

ಆಪಾದಿತ ನೌಕರರು ದಿನಾಂಕ:14.03.2007 ರಂದು ನೋಟೀಸನ್ನು ಸ್ವೀಕರಿಸಿ, ಯಾವುದೇ ಹೇಳಿಕೆಯನ್ನು ನೀಡದ ಕಾರಣ, ಆರೋಪಗಳ ಸತ್ಯಾಸತ್ಯತೆಯನ್ನು ತಿಳಿಯಲು ದಿನಾಂಕ:04/08.08.2007ರ ಈ ಕಛೇರಿ ನಡವಳಿಯಲ್ಲಿ ವಿಚಾರಣಾಧಿಕಾರಿಗಳನ್ನು ನೇಮಕ ಮಾಡಿದಂತೆ, ವಿಚಾರಣಾಧಿಕಾರಿಗಳು, ದಿನಾಂಕ:26.10.2007, 13.06.2008, 18.06.2008ರಂದು ವಿಚಾರಣೆ ನಡೆಸಿದ್ದು, ಆಪಾದಿತರು ಆರೋಪವನ್ನು ಅಲ್ಲಗಳೆದಿರುವುದಿಲ್ಲ. ಬದಲಿಗೆ ಅನಾರೋಗ್ಯ ಕಾರಣದಿಂದ ಸ್ವಯಂ ನಿವೃತ್ತಿಯನ್ನು ಕೋರಿದ್ದು ಮತ್ತು ಅನಾರೋಗ್ಯದ ಬಗ್ಗೆ ವೈದ್ಯರ ಪ್ರಮಾಣ ಪತ್ರಗಳನ್ನು ಈ ಹಿಂದೆ ಪುತ್ತೂರು ಭೂಮಾಪನ ಕಛೇರಿಯಲ್ಲಿ ಸಲ್ಲಿಸಿರುವುದಾಗಿ ತಿಳಿಸಿರುತ್ತಾರೆ. ಆದರೆ ವಿಚಾರಣೆ ವೇಳೆಯಲ್ಲಿ ಅನಾರೋಗ್ಯವನ್ನು ನಿರೂಪಿಸುವ ಯಾವುದೇ ವೈದ್ಯಕೀಯ ಪ್ರಮಾಣ ಪತ್ರಗಳನ್ನು ಸಲ್ಲಿಸಿರುವುದಿಲ್ಲವೆಂದೂ, ಆ ಕಾರಣ, ಆಪಾದಿತರ ವಿರುದ್ಧ ಮಾಡಲಾದ ಆರೋಪವು ಸಾಬೀತಾಗಿರುತ್ತದೆಯೆಂದು ವಿಚಾರಣಾಧಿಕಾರಿಗಳು ಅಭಿಪ್ರಾಯಪಟ್ಟಿರುತ್ತಾರೆ. ವಿಚಾರಣಾಧಿಕಾರಿಗಳ ಅಭಿಪ್ರಾಯವನ್ನು ಒಪ್ಪಿ, ಈ ಕಛೇರಿಯಿಂದ ದಿನಾಂಕ:18.09.2008ರಂದು ನೌಕರರಿಗೆ ವಿಚಾರಣಾ ವರದಿಯೊಂದಿಗೆ 2ನೇ ಕಾರಣ ಕೇಳಿ ನೋಟೀಸನ್ನು ಜಾರಿ ಮಾಡಲಾಗಿರುತ್ತದೆ. ನೌಕರರು ದಿನಾಂಕ:21.10.2008 ರಂದು ನೋಟೀಸನ್ನು ಸ್ವೀಕರಿಸಿ ಯಾವುದೇ ಹೇಳಿಕೆಯನ್ನು ನೀಡಿರುವುದಿಲ್ಲ.

ಆಪಾದಿತರು ದಿನಾಂಕ:01.08.2002 ರಿಂದ ಅನಧಿಕೃತ ಗೈರು ಹಾಜರಾಗಿದ್ದು, ಈವರೆವಿಗೂ ಅನಧಿಕೃತ ಗೈರು ಹಾಜರಿಯಲ್ಲಿಯೇ ಮುಂದುವರೆಯುತ್ತಿದ್ದು, ವಿಚಾರಣೆಯಲ್ಲಿ ಅನಾರೋಗ್ಯದ ಕಾರಣದಿಂದ ಗೈರು ಹಾಜರಾಗಿರುವುದಾಗಿ ತಿಳಿಸಿರುವ ಬಗ್ಗೆ ಪರಿಶೀಲಿಸಲಾಗಿ, ಅಂತಹ ಗಂಭೀರವಾದ ದೀರ್ಘಾವಧಿಯ ಅನಾರೋಗ್ಯವನ್ನು ನಿರೂಪಿಸುವ ಯಾವುದೇ ವೈದ್ಯಕೀಯ ಪ್ರಮಾಣ ಪತ್ರಗಳನ್ನು ಸಲ್ಲಿಸದಿರುವುದನ್ನು ಗಮನಿಸಿದಾಗ, ಆಪಾದಿತರು ಕರ್ತವ್ಯಕ್ಕೆ ದೀರ್ಘಾವಧಿಯ ಅನಧಿಕೃತ ಗೈರು ಹಾಜರಾಗುವ ಪ್ರವೃತ್ತಿಯನ್ನು ಬೆಳೆಸಿಕೊಂಡು ಗಂಭೀರವಾದ ಕರ್ತವ್ಯಚ್ಯುತಿ ಎಸಗುತ್ತಿದ್ದು, ಸದರಿಯವರಿಗೆ ಸರ್ಕಾರಿ ಕೆಲಸ ನಿರ್ವಹಿಸುವಲ್ಲಿ ಯಾವುದೇ ಶ್ರದ್ಧ ಆಸಕ್ತಿ ಇಲ್ಲದಿರುವುದು ಕಂಡು ಬರುತ್ತಿದ್ದು, ಆರೋಪ ಸಾಬೀತಾಗಿರುವ ಬಗ್ಗೆ ವಿಚಾರಣಾ ವರದಿಯನ್ನು ಮತ್ತು ವಿಚಾರಣಾ ವೇಳೆಯಲ್ಲಿ ಆಪಾದಿತರು ನೀಡಿದ ಹೇಳಿಕೆಯನ್ನು ಪರಿಶೀಲಿಸಿ, ಆಪಾದಿತರಿಗೆ ಕಠಿಣ ದಂಡನೆಯನ್ನು ವಿಧಿಸುವುದು ಸೂಕ್ತವೆಂದು ಅಭಿಪ್ರಾಯಪಟ್ಟು ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಶ್ರೀ ಆನಂದ್‌ನಾಯಕ್ ದ್ವಿತೀಯ ದರ್ಜೆ ಭೂಮಾಪಕರವರು ದಿನಾಂಕ:01.08.2002 ರಿಂದ ಇಲ್ಲಿಯವರೆಗೆ ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಾಗಿರುವುದು, ಆರೋಪಿತ ನೌಕರರು ನೀಡಿರುವ ಹೇಳಿಕೆ ಮತ್ತು ದಾಖಲೆಗಳಿಂದ ಸಾಬೀತಾಗಿರುತ್ತದೆ. ದಿನಾಂಕ:01.08.2002 ರಿಂದ ಯಾವುದೇ ರಜೆ ಅರ್ಜಿಯನ್ನು ಸಲ್ಲಿಸದೆ, ಸರ್ಕಾರಿ ಕೆಲಸಕ್ಕೆ ದೀರ್ಘಕಾಲದವರೆಗೆ ಅನಧಿಕೃತ ಗೈರು ಹಾಜರಾಗಿರುವುದು ಕೆ.ಸಿ.ಎಸ್.ಆರ್. ನಿಯಮ 108ನ್ನು ಆಕರ್ಷಿಸಿರುವ ಹಿನ್ನೆಲೆಯಲ್ಲಿ ಆಪಾದಿತ ನೌಕರರು ಗಂಭೀರವಾದ ಕರ್ತವ್ಯ ಲೋಪ ಮತ್ತು ದುರ್ವರ್ತನೆ ಎಸಗಿದಂತಾಗಿರುತ್ತದೆ.

ಕರ್ನಾಟಕ ಸರ್ಕಾರಿ ಸೇವಾ ನಿಯಮಾವಳಿ ನಿಯಮ 108ರ ಪ್ರಕಾರ ಸರ್ಕಾರವು ಪ್ರಕರಣದ ವಿಶೇಷ ಸಂದರ್ಭಗಳಿಂದಾಗಿ ಅನ್ಯಥಾ ನಿರ್ಣಯಿಸದ ಹೊರತು 4 ತಿಂಗಳು ಹಾಗೂ ಹೆಚ್ಚಿನ ಅವಧಿಗೆ ರಜೆ ಪಡೆದುಕೊಳ್ಳದೇ ಕರ್ತವ್ಯಕ್ಕೆ ವಿಮುಖರಾಗಿ ಗೈರು ಹಾಜರಾಗುವ ಸರ್ಕಾರಿ ನೌಕರರನ್ನು ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರಲ್ಲಿ ನಮೂದಿಸಲಾದ ಕಾರ್ಯವಿಧಾನವನ್ನನುಸರಿಸಿ ಸೇವೆಯಿಂದ ವಜಾ ಮಾಡಬಹುದಾಗಿರುತ್ತದೆ ಅಥವಾ ಸೇವೆಯಿಂದ ತೆಗೆದು ಹಾಕಬಹುದಾಗಿರುತ್ತದೆ ಆಪಾದಿತರಿಗೆ ಸರ್ಕಾರಿ ಕೆಲಸ ನಿರ್ವಹಿಸುವಲ್ಲಿ ಆಸಕ್ತಿ ಇಲ್ಲದೆ ದೀರ್ಘಕಾಲದಿಂದ ಗೈರು ಹಾಜರಾಗಿದ್ದು, ಈ ಪ್ರಕರಣದಲ್ಲಿ ಆಪಾದಿತರು ಯಾವುದೇ ಪ್ರಬಲ ಕಾರಣವಿಲ್ಲದೆ, ಸರ್ಕಾರಿ ಕೆಲಸಕ್ಕೆ ಹಾಜರಾಗದೆ ದಿನಾಂಕ:01.08.2002 ರಿಂದ ಇಲ್ಲಿಯವರೆಗೆ ಅನಧಿಕೃತ ಗೈರು ಹಾಜರಾಗಿರುವುದು ತೀವ್ರತರನಾದ ದುರ್ವರ್ತನೆ ಆಗಿರುವುದರಿಂದ ಹಾಗೂ ಅವರ ವಿರುದ್ಧ ಮಾಡಲಾದ ಆರೋಪವು ಸಾಬೀತಾಗಿರುವ ಹಿನ್ನೆಲೆಯಲ್ಲಿ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 8(viii) ರೊಂದಿಗೆ ಓದಿಕೊಂಡ ನಿಯಮ 9(3)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ರಾಜೀವ್ ಚಾವ್ಲಾ, ಆಯುಕ್ತರು, ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆ, ಬೆಂಗಳೂರು ಆದ ನಾನು ಶ್ರೀ ಆನಂದ್‌ನಾಯಕ್ ದ್ವಿತೀಯ ದರ್ಜೆ ಭೂಮಾಪಕರು, ತಹಶೀಲ್ದಾರ್, ಪುತ್ತೂರು (ಈ ಹಿಂದೆ ನೌಕರರು ಭೂದಾಖಲೆಗಳ ಸಹಾಯಕ ನಿರ್ದೇಶಕರು, ಪುತ್ತೂರು ಕಛೇರಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅನಧಿಕೃತ ಗೈರು ಹಾಜರಿಯಲ್ಲಿಯೇ ಮುಂದುವರೆಯುತ್ತಿದ್ದ ಕಾರಣ, ಇಲಾಖೆಯು ಕಂದಾಯ ಇಲಾಖೆಯಲ್ಲಿ ಕಾರ್ಯ ವಿಲೀನಗೊಂಡ ನಂತರ ಯಾವುದೇ ಕಛೇರಿಗೆ ನೌಕರರನ್ನು ಸ್ಥಳ ನಿಯುಕ್ತಿಗೊಳಿಸಿರುವುದಿಲ್ಲ) ರವರನ್ನು ಸೇವೆಯಿಂದ ವಜಾ ಮಾಡಿ ಆದೇಶಿಸಿದ್ದೇನೆ.

ಆಯುಕ್ತರು,
ಭೂಮಾಪನ ಕಂದಾಯ ವ್ಯವಸ್ಥೆ ಮತ್ತು
ಭೂದಾಖಲೆಗಳು, ಬೆಂಗಳೂರು.

ಪಿ.ಆರ್.287

**ಕರ್ನಾಟಕ ಲೋಕಸೇವಾ ಆಯೋಗ, "ಉದ್ಯೋಗ ಸೌಧ", ಬೆಂಗಳೂರು–01**

**ಅಧಿಸೂಚನೆ**

**ಇ(1) 9416/2008–09/ಪಿಎಸ್‌ಸಿ, ದಿನಾಂಕ:18ನೇ ಮಾರ್ಚ್, 2009**

**ವಿಷಯ:** 2006–2007ನೇ ಸಾಲಿನ ಪ್ರೌಢಶಾಲಾ ಮುಖ್ಯೋಪಾಧ್ಯಾಯರ 558 ಹುದ್ದೆಗಳ ಮುಖ್ಯ ಪರೀಕ್ಷೆಯಲ್ಲಿ ಪರೀಕ್ಷಾ ಸೂಚನೆಗಳನ್ನು ಉಲ್ಲಂಘಿಸಿದ ಶ್ರೀ ರಘೋತ್ತಮ ಹೆಚ್.ಬಿ. (ನೋಂ.ಸಂ.8874) ಅಭ್ಯರ್ಥಿಗೆ ದಂಡನೆ ವಿಧಿಸುವ ಬಗ್ಗೆ.

**ಓದಲಾಗಿದೆ:**

1) ಶ್ರೀ ರಘೋತ್ತಮ ಹೆಚ್.ಬಿ. ಇವರ 2006–07ನೇ ಸಾಲಿನ ಪ್ರೌಢಶಾಲಾ ಮುಖ್ಯೋಪಾಧ್ಯಾಯರ ಮುಖ್ಯ ಪರೀಕ್ಷೆಯ ಉತ್ತರ ಪತ್ರಿಕೆ.
2) ಶ್ರೀ ರಘೋತ್ತಮ ಹೆಚ್.ಬಿ. ಇವರಿಗೆ ಜಾರಿ ಮಾಡಿರುವ ಕಾರಣ ಕೇಳುವ ನೋಟೀಸಿನ ಸಂಖ್ಯೆ: ಇ(1)3368/ 2008–09/ ಪಿಎಸ್‌ಸಿ, ದಿನಾಂಕ:19.02.2009.
3) ಶ್ರೀ ರಘೋತ್ತಮ ಹೆಚ್.ಬಿ. ಇವರು ದಿನಾಂಕ:25.02.2009ರಂದು ಸಲ್ಲಿಸಿದ ಸಮಜಾಯಿಷಿ ಪತ್ರ.

ಪ್ರಸ್ತಾವನೆ:

ಮೇಲೆ ಓದಲಾದ 1ರನ್ವಯ ಶ್ರೀ ರಘೋತ್ತಮ ಹೆಚ್.ಬಿ. ಇವರು 2006–07ನೇ ಸಾಲಿನ ಪ್ರೌಢಶಾಲಾ ಮುಖ್ಯೋಪಾಧ್ಯಾಯರ ಮುಖ್ಯ ಪರೀಕ್ಷೆಗೆ ಸಲ್ಲಿಸಿದ್ದ ಅರ್ಜಿಯ ಮೇರೆಗೆ ಇವರಿಗೆ ಸದರಿ ಪರೀಕ್ಷೆ ತೆಗೆದುಕೊಳ್ಳಲು ನೋಂದಣಿ ಸಂಖ್ಯೆ:8874ರ ಪ್ರವೇಶ ಪತ್ರವನ್ನು ಜಾರಿ ಮಾಡಲಾಗಿತ್ತು. ಅದರಂತೆ ಇವರು ದಿನಾಂಕ:20.04.2008 ರಿಂದ02.05.2008ರವರೆಗೆ ನಡೆಸಲಾದ ಮುಖ್ಯ ಪರೀಕ್ಷೆಯ ಅಪರಾಧಶಾಸ್ತ್ರ ಪತ್ರಿಕೆ–1ರ ಪರೀಕ್ಷೆಗೆ ಹಾಜರಾಗಿ ಉತ್ತರ ಪತ್ರಿಕೆಯಲ್ಲಿ ಕೆಲವರ ಹೆಸರುಗಳನ್ನು ಹಾಗೂ ಸಂಖ್ಯೆಗಳನ್ನು ನಮೂದು ಮಾಡಿ ಪರೀಕ್ಷಾ ಸೂಚನೆಗಳನ್ನು ಉಲ್ಲಂಘಿಸಿರುತ್ತಾರೆ ಎಂಬುದಾಗಿ ವರದಿಯಾಗಿದ್ದ ಕಾರಣ ಮೇಲೆ ಓದಲಾದ (2)ರನ್ವಯ ಸದರಿ ಅಭ್ಯರ್ಥಿಗೆ ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಲಾಗಿತ್ತು. ಈ ನೋಟೀಸಿಗೆ ಸಂಬಂಧಿಸಿದಂತೆ ಅಭ್ಯರ್ಥಿಯು ದಿನಾಂಕ:25.02.2009ರಂದು ವಿಚಾರಣಾಧಿಕಾರಿಗಳ ಮುಂದೆ ಇವರ ವಿರುದ್ಧದ ಆರೋಪವು ಸಾಬೀತಾಗಿರುವ ಕಾರಣ ತಮ್ಮ ವಿರುದ್ಧದ ಆರೋಪವನ್ನು ಒಪ್ಪಿಕೊಂಡಿರುತ್ತಾರೆ.

ಆಯೋಗವು ಈ ಬಗ್ಗೆ ಕೂಲಂಕಷವಾಗಿ ಪರಿಶೀಲಿಸಿ ಕೆಳಗಿನಂತೆ ದಂಡನೆ ವಿಧಿಸಲು ಆದೇಶಿಸಿರುತ್ತದೆ.

**ಆದೇಶ ಸಂಖ್ಯೆ: ಇ(1)9415/2008–09/ ಪಿಎಸ್‌ಸಿ, ಬೆಂಗಳೂರು, ದಿನಾಂಕ:18ನೇ ಮಾರ್ಚ್, 2009**

ಕರ್ನಾಟಕ ಲೋಕಸೇವಾ ಆಯೋಗದ ಅಧಿಕೃತ ಜ್ಞಾಪನ ಸಂಖ್ಯೆ: ಆಡಳಿತ 398/93–94/ಪಿಎಸ್‌ಸಿ, ದಿನಾಂಕ:14.09.1993ರಲ್ಲಿ ಪ್ರದತ್ತವಾದ ಅಧಿಕಾರದ ಮೇರೆಗೆ ಶ್ರೀ ರಘೋತ್ತಮ ಹೆಚ್.ಬಿ. (ನೋಂ.ಸಂ.8874) ನಂ.74, ಮಾತೃಶ್ರೀ ನಿಲಯ, ಪಿ & ಟಿ ಕಾಲೋನಿ, ಗುರು ರಾಘವೇಂದ್ರ ಥಿಯೇಟರ್ ರಸ್ತೆ, ಚಾಮರಾಜನಗರ–571313, ಇವರಿಗೆ 2006–07ನೇ ಸಾಲಿನಲ್ಲಿ ಆಯೋಗವು ನಡೆಸಿದ ಪ್ರೌಢಶಾಲಾ ಮುಖ್ಯೋಪಾಧ್ಯಾಯರ 558 ಹುದ್ದೆಗಳ ಮುಖ್ಯ ಪರೀಕ್ಷೆಯ ಅಭ್ಯರ್ಥಿತ್ವವನ್ನು ರದ್ದುಪಡಿಸುವ ದಂಡನೆಯನ್ನು ವಿಧಿಸಲಾಗಿದೆ.

ಆಯೋಗದ ಆದೇಶದ ಮೇರೆಗೆ
**ವಿ.ಬಿ. ಪಾಟೀಲ್**
ಕಾರ್ಯದರ್ಶಿ,
ಕರ್ನಾಟಕ ಲೋಕಸೇವಾ ಆಯೋಗ.

ಪಿ.ಆರ್.289

**PROCEEDINGS OF THE COMMISSIONER, DIRECTORATE OF EMPLOYMENT & TRAINING, ''KAUSHALYA BHAVAN'', NEAR DAIRY CIRCLE, BANNERGHATTA ROAD, BANGALORE-560 029**

The Officers borne on the Employment Wing of the Department of Employment and Training were bestowed with the powers and rights detailed in Section 6 of the Employment Exchanges (Compulsory Notification of Vacancies) Act 1959 vide the Directorate Notification No. DEX-11/CR-135/87-88, Dated:15th July, 1988 read with Corrigendum Dated:7th September, 1988 duly published in Part-III Section 2 of Karnataka Gazette Dated:25th august, 1988 and 15th September, 1988 respectively. In the context of formation of 2 new districts in the State by the State Government vide G.O.No.ಆರ್‌ಡಿ 27 ಭೂದಾಪು 2006 (ಭಾಗ–3), ದಿನಾಂಕ:03.08.2007 and subsequently, certain changes have taken place in the structure of the organization which necessitate certain modifications to the orders issued earlier in this behalf. Hence, the Notification.

**Notification No. DET/EMP/EMI-8(2)/CR-2/2009-10, Dated:5th May, 2009**

In exercise of the powers conferred by Section 6 of the Employment Exchanges (Compulsory Notification of Vacancies) Act 1959, read with Rule 7 of Employment Exchanges (Compulsory Notification of Vacancies) Rules 1960, I, Sri Ramesh Zalki, Commissioner, Department of Employment and Training, Government of Karnataka, Bangalore, do hereby authorise the officers specified in column (2) of the table below to exercise the powers and rights detailed in Section 6 of the Act in respect of the establishments situated in their respective jurisdiction as indicated in column (3) of the table below:

The notification comes into effect from the date of publication in the Karnataka Gazette.

**Table**

| Sl. No. | Designation of the Officer | Jurisdiction |
|---|---|---|
| 1. | Employment Officer, District Employment Exchange, Chikkaballapur. | Revenue district of Chikkaballapur. |
| 2. | Employment Officer, District Employment Exchange, Ramanagara. | Revenue District of Ramanagara. |

In view of the foregoing, the particulars mentioned in respect of the Offices and Officers in the earlier Notification No.DEX-11/CR-135/87-88, Dated:15th July, 1988 stand modified/ added to the extent indicated above.

**RAMESH ZALKI**
Commissioner, Employment & Training.

PR-399

**ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕರ್ನಾಟಕ ರಾಜ್ಯ ಮೀಸಲು ಪೊಲೀಸ್, ಬೆಂಗಳೂರು ಇವರ ನಡವಳಿಗಳು**

**ವಿಷಯ:** ಶ್ರೀ ಕೆ.ಎಂ. ಪುಟ್ಟಸ್ವಾಮಿ, ಹೆಚ್‌ಸಿ–183, 1ನೇ ಪಡೆ, ಕೆ.ಎಸ್.ಆರ್.ಪಿ., ಬೆಂಗಳೂರು ಇವರ ವಿರುದ್ಧ ಕೆ.ಎಸ್.ಪಿ. (ಡಿ.ಪಿ) ರೂಲ್ಸ್, 1965ರ ನಿಯಮ 6ರ ಅನ್ವಯ ಶಿಸ್ತಿನ ಕ್ರಮ ತೆಗೆದುಕೊಳ್ಳುವ ಬಗ್ಗೆ.

**ಉಲ್ಲೇಖ:**
1. ಪೊಲೀಸ್ ಇನ್ಸ್‌ಪೆಕ್ಟರ್, ಮಡಿವಾಳ ಪೊಲೀಸ್ ಠಾಣೆ, ಬೆಂಗಳೂರು ರವರ ಪತ್ರ ದಿನಾಂಕ: 9.5.2006.
2. ಕಮಾಂಡೆಂಟ್, 1ನೇ ಪಡೆ, ಕೆ.ಎಸ್.ಆರ್.ಪಿ., ಬೆಂಗಳೂರು ರವರ ಆದೇಶ ಸಂಖ್ಯೆ: ಡಿಇ/ಆರ್–7/13/2006 ದಿನಾಂಕ: 6.6.2006 (ಅಮಾನತ್ತು ಆದೇಶ)
3. ಕಮಾಂಡೆಂಟ್, 1ನೇ ಪಡೆ, ಕೆ.ಎಸ್.ಆರ್.ಪಿ., ಬೆಂಗಳೂರು ರವರ ಜ್ಞಾಪನ ಸಂಖ್ಯೆ: ಡಿಇ/ಆರ್–6/10/2006 ದಿನಾಂಕ: 20.9.2006 ಮತ್ತು 12.6.2007 (ವಿಚಾರಣಾಧಿಕಾರಿ ನೇಮಕಾತಿ ಆದೇಶ)
4. ವಿಚಾರಣಾಧಿಕಾರಿ ಹಾಗೂ ಸಹಾಯಕ ಕಮಾಂಡೆಂಟ್, ಬಿ–ವಿಭಾಗ, 1ನೇ ಪಡೆ, ಕೆ.ಎಸ್.ಆರ್.ಪಿ., ಬೆಂಗಳೂರು ರವರ ಪತ್ರ ಸಂಖ್ಯೆ: ಎಸಿಬಿ/ಡಿಇ/1/2006–07 ದಿನಾಂಕ: 17.10.2006 (ದೋಷಾರೋಪಣಾ ಪತ್ರ)
5. ವಿಚಾರಣಾಧಿಕಾರಿ ಹಾಗೂ ಸಹಾಯಕ ಕಮಾಂಡೆಂಟ್, ಬಿ–ವಿಭಾಗ, 1ನೇ ಪಡೆ, ಕೆ.ಎಸ್.ಆರ್.ಪಿ., ಬೆಂಗಳೂರು ರವರ ವರದಿ ದಿನಾಂಕ 28.8.2007 (ವಿಚಾರಣಾ ವರದಿ)
6. ಕಮಾಂಡೆಂಟ್, 1ನೇ ಪಡೆ, ಕೆ.ಎಸ್.ಆರ್.ಪಿ., ಬೆಂಗಳೂರು ರವರ ಪತ್ರ ಸಂಖ್ಯೆ: 10/ಡಿಇ/ಆರ್–6/2006–07 ದಿನಾಂಕ: 17.9.2007 (ವಿಚಾರಣಾ ವರದಿಯನ್ನು ಈ ಕಛೇರಿಗೆ ಕಳುಹಿಸಿರುವುದು)
7. ಈ ಕಛೇರಿಯ ಪತ್ರದ ಸಮಸಂಖ್ಯೆ ದಿನಾಂಕ: 12.2.2008 (ಕಾರಣ ಕೇಳುವ ಸೂಚನಾ ಪತ್ರ)
8. ಕಮಾಂಡೆಂಟ್, 1ನೇ ಪಡೆ, ಕೆ.ಎಸ್.ಆರ್.ಪಿ., ಬೆಂಗಳೂರು ರವರ ಪತ್ರ ಸಂಖ್ಯೆ: 10/ಡಿಇ/ಆರ್–6/2006–07 ದಿನಾಂಕ: 3.3.2008
9. ಈ ಕಛೇರಿಯ ಪತ್ರದ ಸಮಸಂಖ್ಯೆ ದಿನಾಂಕ: 25.6.2008 (ಕರ್ನಾಟಕ ರಾಜ್ಯ ಪತ್ರದಲ್ಲಿ ಕಾರಣ ಕೇಳುವ ಸೂಚನಾ ಪತ್ರ ಪ್ರಕಟಿಸಲು ಕೋರಿ ಬರೆದ ಪತ್ರ).
10. ಕರ್ನಾಟಕ ರಾಜ್ಯ ಪತ್ರ, ಗುರುವಾರ ಆಗಸ್ಟ್ 28, 2008.

ಶ್ರೀ ಕೆ.ಎಂ. ಪುಟ್ಟಸ್ವಾಮಿ, ಹೆಚ್‌ಸಿ–183, 1ನೇ ಪಡೆ, ಕೆ.ಎಸ್.ಆರ್.ಪಿ., ಬೆಂಗಳೂರು ರವರ ವಿರುದ್ಧ ಶ್ರೀಮತಿ ಪಿಳ್ಳಮ್ಮ, ಕೋಂ ನಾಗರಾಜು, ನಂ.453, 38ನೇ ಬ್ಲಾಕ್, ಹುಡ್ಕೋ ಪೊಲೀಸ್ ವಸತಿಗೃಹ, ಕೋರಮಂಗಲ, ಬೆಂಗಳೂರು ಇವರು ಮಡಿವಾಳ ಪೊಲೀಸ್ ಠಾಣೆಯಲ್ಲಿ ಅಪರಾಧ ಮೊಕದ್ದಮೆ ದಾಖಲಿಸಿದ ಹಿನ್ನೆಲೆಯಲ್ಲಿ ಪೊಲೀಸ್ ಇನ್ಸ್‌ಪೆಕ್ಟರ್, ಮಡಿವಾಳ ಪೊಲೀಸ್ ಠಾಣೆ ರವರು ಉಲ್ಲೇಖ (1)ರ ದಿನಾಂಕ 9.5.2006ರ ಪತ್ರದಲ್ಲಿ, ಶ್ರೀಮತಿ ಕೆ.ಎಂ. ಪುಟ್ಟಸ್ವಾಮಿ, ಹೆಚ್‌ಸಿ–183 ಮತ್ತು ಅವರ ಹೆಂಡತಿ ಶ್ರೀಮತಿ ಚಂದ್ರಮ್ಮ ಪಟಾಕಿ ಚೀಟಿ ನಡೆಸುತ್ತಿದ್ದು, ದೂರುದಾರರಿಂದ ತಿಂಗಳಿಗೆ ರೂ.400–00 ರಂತೆ 2 ಚೀಟಿಯನ್ನು 12 ತಿಂಗಳ ಕಾಲ ಒಟ್ಟು ರೂ.4,800–00 ಗಳನ್ನು ಕಟ್ಟಿಸಿಕೊಂಡು ಕೊನೆಯಲ್ಲಿ ಚಿನ್ನವನ್ನಾಗಲಿ, ಹಣವನ್ನಾಗಲಿ ಕೊಡುತ್ತೇವೆಂದು ಹೇಳಿ ನವೆಂಬರ್–2005ನೇ ದೀಪಾವಳಿ ಹಬ್ಬಕ್ಕೆ ಯಾವುದೇ ಚಿನ್ನ, ಹಣ ಮತ್ತು ಪಟಾಕಿ ಕೊಡದೆ ದಿನಾಂಕ:19.4.2006 ರಂದು ರಾತ್ರಿ ಮನೆ ಖಾಲಿ ಮಾಡಿಕೊಂಡು ನಂಬಿಕೆ ದ್ರೋಹ, ಮೋಸ ಮಾಡಿ ಹೋಗಿದ್ದಾರೆಂದು, ಸದರಿಯವರನ್ನು ಪತ್ತೆ ಮಾಡಿ ಕಾನೂನು ಕ್ರಮ ಜರುಗಿಸಬೇಕೆಂದು ದೂರು ಕೊಟ್ಟಿದ್ದು, ಸದರಿ ದೂರಿನ ಮೇರೆಗೆ ಮೊಕದ್ದಮೆ ಸಂಖ್ಯೆ: 271/2006 ಕಲಂ 406, 420 ಐಪಿಸಿ, ಮತ್ತು ಕಲಂ 3, 4 ಆಫ್ ಪ್ರೈಸ್ ಚಿಟ್ಸ್ ಅಂಡ್ ಮನಿ ಸರ್ಕ್ಯುಲೇಷನ್ ಸ್ಕೀಮ್ (ಬಿಸಿನೆಸ್) ಆಕ್ಟ್, 1978ರ ಪ್ರಕಾರ ಕ್ರಿಮಿನಲ್ ಮೊಕದ್ದಮೆ ದಾಖಲಾಗಿರುತ್ತದೆಂದು ತಿಳಿಸಿರುತ್ತಾರೆ.

ಹಾಗೆಯೇ ಶ್ರೀ ಬಿ.ಆರ್. ಕಿರಣ್‌ಕುಮಾರ್, ಬಿನ್ ವಿ. ರಾಜು, ನಂ.146, 1ನೇ ಮುಖ್ಯರಸ್ತೆ, ಚಾಮರಾಜಪೇಟೆ, ಬೆಂಗಳೂರು ಇವರು, ಸದರಿ ಶ್ರೀ ಕೆ.ಎಂ. ಪುಟ್ಟಸ್ವಾಮಿ, ಹೆಚ್‌ಸಿ–183 ಇವರು ರೂ.50,000–00ಗಳ ಚೀಟಿ ವ್ಯವಹಾರ ನಡೆಸುತ್ತಿದ್ದು, ತಮ್ಮನ್ನೂ ಸೇರಿದಂತೆ ಇತರರಿಂದ ತಿಂಗಳಿಗೆ ರೂ.2,000–00 ಗಳಂತೆ ಚೀಟಿ ಹಣ ಪಡೆದು 2005ನೇ ಡಿಸೆಂಬರ್ ತಿಂಗಳಲ್ಲಿ ಇದ್ದಕ್ಕಿದ್ದಂತ ಚೀಟಿ ವ್ಯವಹಾರವನ್ನು ನಿಲ್ಲಿಸಿದಾಗ, ಹಣವನ್ನು ಕೇಳಲು ಹೋದಾಗ ಮನೆಯನ್ನು ಖಾಲಿ ಮಾಡಿಕೊಂಡು ಹೋಗಿರುವುದಾಗಿ ತಿಳಿದಿದ್ದು, ಶ್ರೀ ಕೆ.ಎಂ. ಪುಟ್ಟಸ್ವಾಮಿ ರವರು ತನಗೆ ಹಾಗೂ ಇತರರಿಗೆ ಮೋಸ ಮಾಡಿರುತ್ತಾರೆಂದು ನೀಡಿದ ದೂರಿನ ಮೇರೆಗೆ ಮಡಿವಾಳ ಪೊಲೀಸ್ ಠಾಣೆ ಮೊಕದ್ದಮೆ ಸಂಖ್ಯೆ: 295/06 ಕಲಂ 420 ಐಪಿಸಿ, ಮತ್ತು ಕಲಂ 3, 4 ಆಫ್ ಪ್ರೈಸ್ ಚಿಟ್ಸ್ ಅಂಡ್ ಮನಿ ಸರ್ಕ್ಯುಲೇಷನ್ ಸ್ಕೀಮ್ (ಬಿಸಿನೆಸ್) ಆಕ್ಟ್, 1978ರ ಪ್ರಕಾರ ಕ್ರಿಮಿನಲ್ ಮೊಕದ್ದಮೆ ದಾಖಲಾಗಿರುತ್ತದೆಂದು ತಿಳಿಸಿರುತ್ತಾರೆ.

ಈ ಎರಡೂ ಕೇಸುಗಳ ತನಿಖಾ ಕಾಲದಲ್ಲಿ ದಿನಾಂಕ: 8.5.2006 ರಂದು ಆರೋಪಿ ಕೆ.ಎಂ. ಪುಟ್ಟಸ್ವಾಮಿ ಇವರನ್ನು ದಸ್ತಗಿರಿ ಮಾಡಿ ಈ ಆರೋಪಿಯನ್ನು ಮಾನ್ಯ 4 ಮತ್ತು 6ನೇ ಎ.ಸಿ.ಎಂ.ಎಂ. ನ್ಯಾಯಾಲಯಗಳ ಮುಂದೆ ಹಾಜರುಪಡಿಸಿದ್ದು, ನ್ಯಾಯಾಲಯಗಳ ಆದೇಶದಂತೆ ಆರೋಪಿಯು ದಿನಾಂಕ 22.5.2006 ರವರೆಗೆ ನ್ಯಾಯಾಂಗ ಬಂಧನಕ್ಕೆ ಆದೇಶವಾಗಿರುವುದರಿಂದ, ಆರೋಪಿಯು ಹಾಲಿ ಕೇಂದ್ರ ಕಾರಾಗೃಹದಲ್ಲಿ ಇರುತ್ತಾನೆಂದು ತಿಳಿಸಿರುತ್ತಾರೆ.

ಕಮಾಂಡೆಂಟ್, 1ನೇ ಪಡೆ, ಕೆ.ಎಸ್.ಆರ್.ಪಿ., ಬೆಂಗಳೂರು ರವರು ಮೇಲ್ಕಂಡ ವರದಿಗಳ ಹಿನ್ನೆಲೆಯಲ್ಲಿ ಶ್ರೀ ಕೆ.ಎಂ. ಪುಟ್ಟಸ್ವಾಮಿ, ಹೆಚ್‌ಸಿ–183 ಇವರನ್ನು ದಸ್ತಗಿರಿ ಮಾಡಲಾಗಿರುವ ದಿನಾಂಕ: 8.5.2006 ರಿಂದ ಜಾರಿಗೆ ಬರುವಂತೆ ಉಲ್ಲೇಖ (2)ರ ಪ್ರಕಾರ ಸೇವೆಯಿಂದ ಅಮಾನತ್ತುಗೊಳಿಸಿ ದಿನಾಂಕ: 6.6.2006 ರಂದು ಆದೇಶ ಹೊರಡಿಸಿರುತ್ತಾರೆ. ಈ ಸಂಬಂಧದಲ್ಲಿ ಕಮಾಂಡೆಂಟ್, 1ನೇ ಪಡೆ ರವರು ಕೆ.ಎಸ್.ಪಿ. (ಡಿ.ಪಿ.) ರೂಲ್ಸ್, 1965ರ ನಿಯಮ 6ರ ಅಡಿಯಲ್ಲಿ ವಿವರವಾದ ಇಲಾಖಾ ವಿಚಾರಣೆ ನಡೆಸಲು ಉಲ್ಲೇಖ (3)ರ ಆದೇಶದಲ್ಲಿ ಸಹಾಯಕ ಕಮಾಂಡೆಂಟ್, ಬಿ–ವಿಭಾಗ, 1ನೇ ಪಡೆ ರವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿ ಆದೇಶ ಹೊರಡಿಸಿರುತ್ತಾರೆ.

ವಿಚಾರಣಾಧಿಕಾರಿಗಳು ತಮಗೆ ಪ್ರದತ್ತವಾದ ಅಧಿಕಾರ ಚಲಾಯಿಸಿ, ಆಪಾದಿತ ಪೊಲೀಸ್ ಅಧಿಕಾರಿಯವರ ವಿರುದ್ಧ ಈ ಕೆಳಕಂಡ ಆರೋಪಗಳನ್ನು ಹೊರಿಸಿ ಉಲ್ಲೇಖ (4)ರಲ್ಲಿ ದೋಷಾರೋಪಣಾ ಪತ್ರ ಹೊರಡಿಸಿರುತ್ತಾರೆ.

**ಆರೋಪ:**

ಶ್ರೀ ಕೆ.ಎಂ. ಪುಟ್ಟಸ್ವಾಮಿ, ಮುಖ್ಯ ಪೇದೆ 183, ಇ, ದಳ, 1ನೇ ಪಡೆ, ಕೆಎಸ್‌ಆರ್‌ಪಿ, ಆದ ನೀವು ಶ್ರೀ ಲಕ್ಷ್ಮಿವೆಂಕಟೇಶ್ವರ ಸ್ವಾಮಿ ಶ್ರೀ ಸೊಲ್ಲಾಪುರದಮ್ಮ ಹೆಸರಿನಲ್ಲಿ ಪಟಾಕಿ ಚೀಟಿ ನಡೆಸಿ ಕೆ.ಎಸ್.ಆರ್.ಪಿ. ಸಿಬ್ಬಂದಿಯವರು ಹಾಗೂ ಸಾರ್ವಜನಿಕರಿಂದ ಪ್ರತಿ ತಿಂಗಳು ರೂ.100–00 ಹಾಗೂ 200–00 ರಂತೆ ಹಣವನ್ನು ವಸೂಲಿ ಮಾಡಿ ವಾಪಸ್ ಕೊಡದೇ ಮೋಸ ಮಾಡಿರುತ್ತೀರಿ. ಹಾಗೂ ವೈಯಕ್ತಿಕ ತೊಂದರೆಯ ನೆಪ ಹೇಳಿಕೊಂಡು ಕೆ.ಎಸ್.ಆರ್.ಪಿ. ಸಿಬ್ಬಂದಿ ಹಾಗೂ ಸಾರ್ವಜನಿಕರಿಂದ ಲಕ್ಷಾಂತರ ರೂಪಾಯಿ ಸಾಲವಾಗಿ ಹಣ ವಸೂಲಿ ಮಾಡಿ ಅವರಿಗೆ ವಾಪಸ್ಸು ಕೊಡದೇ, ತನ್ನ ಖಾತೆಯಲ್ಲಿ ಹಣವಿಲ್ಲದೇ ಇದ್ದರು ಸಹ ಕೆಲವರಿಗೆ ಚೆಕ್ ನೀಡಿ ವಂಚಿಸಿರುವುದಲ್ಲದೇ ಸರ್ಕಾರಿ ವಸತಿ ಗೃಹದಲ್ಲಿ ವಾಸವಾಗಿದ್ದುಕೊಂಡು ರೂ.50,000–00 ಗಳ ಹಣದ ಚೀಟಿ ವ್ಯವಹಾರ ಮಾಡಿ ವಸತಿಗೃಹದ ಸಿಬ್ಬಂದಿಯವರಿಂದ ಮತ್ತು ಸಾರ್ವಜನಿಕರಿಂದ ಹಣ ವಸೂಲಿ ಮಾಡಿ ವಾಪಸ್ ಕೊಡದೇ ವಂಚಿಸಿರುತ್ತೀರಿ. ಹಾಗೂ ವೈಯಕ್ತಿಕ ತೊಂದರೆಯ ನೆಪ ಹೇಳಿಕೊಂಡು ಕೆ.ಎಸ್.ಆರ್.ಪಿ. ಸಿಬ್ಬಂದಿ ಹಾಗೂ ಸಾರ್ವಜನಿಕರಿಂದ ಲಕ್ಷಾಂತರ ರೂಪಾಯಿ ಹಣ ವಸೂಲಿ ಮಾಡಿ ಅವರಿಗೆ ವಾಪಸ್ಸು ಕೊಡದೇ, ಮೋಸಮಾಡಿದ್ದಕ್ಕಾಗಿ, ಮಡಿವಾಳ ಪೊಲೀಸ್ ಠಾಣೆಯಲ್ಲಿ ದಿನಾಂಕ: 24.04.2006 ರಂದು ಅಪರಾಧ ಸಂಖ್ಯೆ 271/06 ಕಲಂ 406,420 ಐ.ಪಿ.ಸಿ, ಮತ್ತು 3, 4, ಆಫ್ ಪ್ರೈಸ್ ಚಿಟ್ಸ್ ಅಂಡ್ ಮನಿ ಸರ್ಕ್ಯುಲೇಷನ್ ಸ್ಕೀಂ (ಬಿಸಿನೆಸ್) ಆಕ್ಟ್ 1978 ಮತ್ತು ದಿನಾಂಕ: 4.5.2006 ರಂದು ಅಪರಾಧ ಸಂಖ್ಯೆ. 295/06 ಕಲಂ 420 ಐ.ಪಿ.ಸಿ. ಮತ್ತು 3, 4, ಆಫ್‌ಪ್ರೈಸ್ ಚಿಟ್ಸ್ ಅಂಡ್ ಮನಿ ಸರ್ಕ್ಯುಲೇಷನ್ ಸ್ಕೀಂ (ಬಿಸಿನೆಸ್) ಆಕ್ಟ್ 1978 ಪ್ರಕಾರ 2 ಕ್ರಿಮಿನಲ್ ಪ್ರಕರಣಗಳು ದಾಖಲಾಗಲು ಕಾರಣರಾಗಿ ತನ್ಮೂಲಕ ಕಾನೂನು ಬಾಹಿರ ಚಟುವಟಿಕೆಯಲ್ಲಿ ತೊಡಗಿ, ಶಿಸ್ತಿನ ಪಡೆಯಲ್ಲಿ ಜವಾಬ್ದಾರಿಯುತ ಸ್ಥಾನದಲ್ಲಿದ್ದ ನೀವು ಕ್ರಿಮಿನಲ್ ಪ್ರಕರಣಗಳಲ್ಲಿ ಆರೋಪಿಯಾಗಿ ಕರ್ತವ್ಯ ಲೋಪವೆಸಗಿ, ಸರ್ಕಾರಿ ನೌಕರರಿಗೆ ತಕ್ಕಂತಹ ನಡತೆಗೆ ವಿರುದ್ಧವಾಗಿ ಹಾಗೂ ಕೆ.ಎಸ್.ಪಿ. (ಕಂಡಕ್ಟ್) ರೂಲ್ಸ್, 1966ರ ನಿಯಮ 21 ಉಪನಿಯಮ 4, ಬಿ ಅನ್ನು ಉಲ್ಲಂಘಿಸಿ ತೀವ್ರ ಅಶಿಸ್ತು ಮತ್ತು ದುರ್ನಡತೆ ಪ್ರದರ್ಶಿಸಿರುತ್ತೀರಿ.

ವಿಚಾರಣಾಧಿಕಾರಿಗಳು ಉಲ್ಲೇಖ (5)ರಲ್ಲಿ ಸಲ್ಲಿಸಿರುವ ವರದಿಯಲ್ಲಿ, ದೋಷಾರೋಪಣಾ ಪತ್ರವನ್ನು ದಿನಾಂಕ: 23.10.2006 ರಂದು ಸ್ವೀಕರಿಸಿದ ಆಪಾದಿತ ಪೊಲೀಸ್ ಅಧಿಕಾರಿಯವರು ದಿನಾಂಕ: 6.12.2006 ರಂದು ದೋಷಾರೋಪಣಾ ಪತ್ರಕ್ಕೆ ಲಿಖಿತ ಉತ್ತರ ಸಲ್ಲಿಸಿದ್ದು, ತದನಂತರ ಪೊಲೀಸ್ ಮಿತ್ರರನ್ನು ನೇಮಿಸಿಕೊಳ್ಳಲು ಅನುಮತಿ ನೀಡಲಾಗಿದೆ. ಪ್ರಥಮ ಮೌಖಿಕ ಹೇಳಿಕೆಯನ್ನು ದಿನಾಂಕ: 22.12.2006 ರಂದು ದಾಖಲಿಸಿಕೊಳ್ಳಲಾಗಿದೆ. ದಿನಾಂಕ: 27.2.2007 ರಂದು ಇನ್ನು ಮುಂದೆ ಇಲಾಖಾ ವಿಚಾರಣೆಗೆ ತಪ್ಪದೇ ಹಾಜರಾಗುವುದಾಗಿ ಬರೆದುಕೊಟ್ಟಿದ್ದಾರೆ. ದಿನಾಂಕ: 6.3.2007 ರಂದು ಒಬ್ಬ ಅಭಿಯೋಗ ಸಾಕ್ಷಿದಾರರ ಹೇಳಿಕೆಯನ್ನು ಎ.ಪಿ.ಒ. ಮತ್ತು ಅವರ ಪೊಲೀಸ್ ಮಿತ್ರರ ಉಪಸ್ಥಿತಿಯಲ್ಲಿ ದಾಖಲಿಸಲಾಗಿದೆ. ತದನಂತರ, ಹಲವಾರು ಬಾರಿ ಸೂಚನಾ ಪತ್ರಗಳನ್ನು ಹೊರಡಿಸಲಾಗಿದ್ದು, ಆಪಾದಿತ ಪೊಲೀಸ್ ಅಧಿಕಾರಿಯವರು ಸ್ವಂತ ಊರಿನಲ್ಲೂ ಇಲ್ಲದೆ, ವಿಳಾಸವನ್ನು ಕೊಡದೆ ತಲೆಮರೆಸಿಕೊಂಡಿದ್ದಾರೆ. ಈ ಬಗ್ಗೆ ಖಚಿತ ಪಡಿಸಿಕೊಂಡ ನಂತರ ವಿಚಾರಣಾಧಿಕಾರಿಯವರು ಇಲಾಖಾ ವಿಚಾರಣೆಯಲ್ಲಿ ಒಟ್ಟು 20 ಜನ ಅಭಿಯೋಗ ಸಾಕ್ಷಿದಾರರನ್ನು ವಿಚಾರಣೆ ಮಾಡಿ ಅವರ ಹೇಳಿಕೆಗಳನ್ನು ದಾಖಲಿಸಿರುತ್ತಾರೆ. ಹಾಗೆಯೇ ಅಭಿಯೋಗದ ಪರವಾಗಿ 15 ಪ್ರದರ್ಶಿಕೆಗಳನ್ನು ಪ್ರದರ್ಶಿಸಿ ಪರಿಶೀಲಿಸಿ, ಅನಿವಾರ್ಯವಾಗಿ ಏಕಪಕ್ಷೀಯವಾಗಿ ಇಲಾಖಾ ವಿಚಾರಣೆಯನ್ನು ನಡೆಸಿದ್ದು, ಎಲ್ಲಾ ಅಂಶಗಳನ್ನು ಪರಿಶೀಲಿಸಿದ ನಂತರ ಆಪಾದಿತ ಪೊಲೀಸ್ ಅಧಿಕಾರಿಯವರ ಮೇಲೆ ಹೊರಿಸಲಾದ ಆಪಾದನೆಗಳು ಯಾವುದೇ ಪೂರ್ವಾನುಮಾನವಿಲ್ಲದೆ ಸಾಭೀತಾಗುತ್ತದೆಂದು ಸ್ಪಷ್ಟವಾಗಿ ಅಭಿಪ್ರಾಯಪಟ್ಟಿರುತ್ತಾರೆ.

ವಿಚಾರಣಾಧಿಕಾರಿಗಳು ಸಲ್ಲಿಸಿರುವ ಉಲ್ಲೇಖ (5)ರ ವಿಚಾರಣಾ ವರದಿಯನ್ನು ಮುಂದಿನ ಕ್ರಮವಾಗಿ ಕಮಾಂಡೆಂಟ್, 1ನೇ ಪಡೆ ರವರು ಉಲ್ಲೇಖ (6)ರ ಪತ್ರದೊಂದಿಗೆ ಈ ಕಛೇರಿಗೆ ಕಳುಹಿಸಿರುತ್ತಾರೆ.

ವಿಚಾರಣಾಧಿಕಾರಿಯವರು ಸಲ್ಲಿಸಿರುವ ಇಲಾಖಾ ವಿಚಾರಣಾ ವರದಿಯನ್ನು, ಸಾಕ್ಷಿಗಳ ಹೇಳಿಕೆಗಳನ್ನು, ಸಂಗ್ರಹಿಸಿದ ದಾಖಲೆಗಳನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ, ಆಪಾದಿತ ಪೊಲೀಸ್ ಅಧಿಕಾರಿಯವರ ವಿರುದ್ಧ ಹೊರಿಸಲಾದ ಆರೋಪಗಳು ಮೇಲ್ನೋಟಕ್ಕೆ ದೃಢಪಟ್ಟಿರುವುದು ಮನದಟ್ಟಾದ ನಂತರ **"ಸದರಿಯವರನ್ನು ಕೆ.ಪಿ.ಆಕ್ಟ್‌ನ ಸೆಕ್ಷನ್ 23 (ಬಿ) ಪ್ರಕಾರ ಸೇವೆಯಿಂದ ತೆಗೆದುಹಾಕುವ ಶಿಕ್ಷೆಯನ್ನು ವಿಧಿಸಲು"** ಪ್ರಸ್ತಾಪಿಸಿ ಉಲ್ಲೇಖ (7)ರಲ್ಲಿ ಕಾರಣ ಕೇಳುವ ಸೂಚನಾ ಪತ್ರವನ್ನು ಹೊರಡಿಸಿ ಕಮಾಂಡೆಂಟ್, 1ನೇ ಪಡೆ ರವರ ಮುಖಾಂತರ ಜಾರಿಗೊಳಿಸಲು ಕಳುಹಿಸಲಾಗಿತ್ತು.

ಕಮಾಂಡೆಂಟ್, 1ನೇ ಪಡೆ, ಕೆ.ಎಸ್.ಆರ್.ಪಿ., ಬೆಂಗಳೂರು ಇವರು ಉಲ್ಲೇಖ (8)ರ ಪತ್ರದಲ್ಲಿ, ಆಪಾದಿತ ಪೊಲೀಸ್ ಅಧಿಕಾರಿಯು ವಾಸವಾಗಿದ್ದ 1ನೇ ಪಡೆ, ಕೆ.ಎಸ್.ಆರ್.ಪಿ. ಅಧೀನದ ಸರ್ಕಾರಿ ವಸತಿಗೃಹಕ್ಕೆ ತೆರಳಿ ನೋಡಿದಾಗ ಅವರು ಮನೆ

ಖಾಲಿ ಮಾಡಿರುವುದು ಕಂಡುಬಂದ ಕಾರಣ ಮತ್ತು ಅಲ್ಲಿ ಸದರಿ ಮುಖ್ಯ ಪೇದೆ ಇಲ್ಲದಿದ್ದರಿಂದ, ದಿನಾಂಕ: 21.2.2008 ರಂದು ಅವರ ಸ್ವ–ಗ್ರಾಮವಾದ ಕುಣಿಗಲ್ ನಗರದ ದೊಡ್ಡಪೇಟೆ, ಶ್ರೀ ಶನಿದೇವರ ದೇವಾಲಯದ ಬೀದಿಯಲ್ಲಿರುವ ಮನೆ ಸಂಖ್ಯೆ: 95, ವಾರ್ಡ್ ಸಂಖ್ಯೆ–4ರಲ್ಲಿರುವ ಮನೆಗೆ ಸಿಬ್ಬಂದಿಯನ್ನು ಕಳಿಸಿದ್ದು, ಅಲ್ಲಿಯೂ ಸಹ ಆಪಾದಿತ ಪೊಲೀಸ್ ಅಧಿಕಾರಿಯವರು ಇಲ್ಲದಿದ್ದರಿಂದ, ಸದರಿಯವರ ತಾಯಿಯಾದ ಶ್ರೀಮತಿ ಚಿಕ್ಕಯಲ್ಲಮ್ಮ ನವರಿಗೆ ಕುಣಿಗಲ್ ಪೊಲೀಸ್ ಠಾಣೆಯ ಸಿಬ್ಬಂದಿಯ ಹಾಗೂ ಆ ಊರಿನ ಪಂಚರ ಸಮಕ್ಷಮ ಪಂಚನಾಮೆ ಮಾಡಿ, ಕಾರಣ ಕೇಳುವ ಸೂಚನಾ ಪತ್ರವನ್ನು ಜಾರಿ ಮಾಡಲಾಗಿದೆಯೆಂದು ತಿಳಿಸಿರುತ್ತಾರೆ.

ತದನಂತರ, ಉಲ್ಲೇಖ (9)ರ ಈ ಕಛೇರಿ ಪತ್ರದಲ್ಲಿ, ಸದರಿ ಕಾರಣ ಕೇಳುವ ಸೂಚನಾ ಪತ್ರವನ್ನು ರಾಜ್ಯ ಪತ್ರದಲ್ಲಿ ಪ್ರಕಟಿಸುವಂತೆ ಕೋರಿ ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಪತ್ರ, ಬೆಂಗಳೂರು ಇವರನ್ನು ಕೋರಲಾಯಿತು. ಅದರಂತೆ ಉಲ್ಲೇಖ (10)ರಲ್ಲಿರುವ ಕರ್ನಾಟಕ ರಾಜ್ಯ ಪತ್ರದಲ್ಲಿ ಸದರಿ ಕಾರಣ ಕೇಳುವ ಸೂಚನಾ ಪತ್ರವನ್ನು ಪ್ರಕಟಿಸಲಾಗಿದೆ.

ಆಪಾದಿತ ಪೊಲೀಸ್ ಅಧಿಕಾರಿಯವರಿಗೆ ಸಾಕಷ್ಟು ಕಾಲಾವಕಾಶವನ್ನು ನೀಡಿದರೂ ಸಹ, ಅವರ ಇರುವಿಕೆಯ ಬಗ್ಗೆ ಅವರು ಯಾವುದೇ ಮಾಹಿತಿ ನೀಡಿರುವುದಿಲ್ಲ ಹಾಗೂ ಕಾರಣ ಕೇಳುವ ಸೂಚನಾ ಪತ್ರವನ್ನು ಆಪಾದಿತ ಪೊಲೀಸ್ ಅಧಿಕಾರಿಯವರ ಖಾಯಂ ವಿಳಾಸದಲ್ಲಿ ದಿನಾಂಕ: 21.2.2008 ರಂದು ಜಾರಿಗೊಳಿಸಿ ದಿನಾಂಕ: 28.8.2008 ರಂದು ರಾಜ್ಯ ಪತ್ರದಲ್ಲಿ ಪ್ರಕಟಿಸಿದ್ದಾಗ್ಯೂ ಇವರಿಗೆ, ಕಾರಣ ಕೇಳುವ ಸೂಚನಾ ಪತ್ರಕ್ಕೆ ಸಮಜಾಯಿಸಿ ಕೊಟ್ಟಿರುವುದಿಲ್ಲ. ಆದುದರಿಂದ, ಆಪಾದಿತ ಪೊಲೀಸ್ ಅಧಿಕಾರಿಯವರಲ್ಲಿ ಯಾವುದೇ ಸಮಜಾಯಿಷಿ ಇರುವುದಿಲ್ಲವೆಂದು ಪರಿಭಾವಿಸಿ ಶ್ರೀ ಕೆಂಪಯ್ಯ, ಐಪಿಎಸ್., ಶಿಸ್ತು ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕೆ.ಎಸ್.ಆರ್.ಪಿ., ಬೆಂಗಳೂರು ಆದ ನಾನು, ಆಪಾದಿತ ಪೊಲೀಸ್ ಅಧಿಕಾರಿಯ ವಿರುದ್ಧ ಈ ಕೆಳಕಂಡಂತೆ ಆದೇಶಿಸಿರುತ್ತೇನೆ.

**ಆದೇಶ ಸಂಖ್ಯೆ: ಡಿಇ/49/2007–08, ದಿನಾಂಕ: 11ನೇ ಡಿಸೆಂಬರ್ 2008**

ಶ್ರೀ ಕೆ.ಎಂ. ಪುಟ್ಟಸ್ವಾಮಿ, ಹೆಚ್‌ಸಿ–183, 1ನೇ ಪಡೆ, ಕೆ.ಎಸ್.ಆರ್.ಪಿ., ಬೆಂಗಳೂರು ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ತೆಗೆದುಹಾಕಲಾಗಿದೆ. ಹಾಗೂ ಇವರನ್ನು ಅಮಾನತ್ತಿನಲ್ಲಿಟ್ಟ ದಿನಾಂಕ: 8.5.2006 ರಿಂದ ಈ ಆದೇಶ ಹೊರಡಿಸುವವರೆಗಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಿದೆ.

**ಕೆಂಪಯ್ಯ**

ಪಿ.ಆರ್. 1409 ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕೆ.ಎಸ್.ಆರ್.ಪಿ., ಬೆಂಗಳೂರು.

## ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರ ನ್ಯಾಯಾಲಯದಲ್ಲಿ

**ನಂ: ಎಸ್‌ಡಿಕೆ/285/ಡಿಟಿಸಿಆರ್/2003–04, ದಿನಾಂಕ: 12ನೇ ಆಗಸ್ಟ್ 2008**

**ಉಪಸ್ಥಿತರು** ನೂರ್ ಮಹಮ್ಮದ್ ಹುಸೇನ್
ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಫಿರ್ಯಾದುದಾರರು:**
ಅಬಕಾರಿ ಉಪ ನಿರೀಕ್ಷಕರು ಇಐಬಿ,
ಮಂಗಳೂರು ದ.ಕ.ಜಿಲ್ಲೆ

**ಆರೋಪಿಗಳು:**
1. ರಾಘವೇಂದ್ರ ಬಿನ್: ಪಿ.ರಾಮ, 3ನೇ ಅವೆನ್ಯೂ ಡೋರ್ ನಂ:7, ಎನ್.ಎಂ.ಪಿ.ಟಿ ಕಾಲೋನಿ, ಪಣಂಬೂರು (ಆಟೋರಿಕ್ಷಾ ಚಾಲಕ)
2. ಅಮಿತ್ ಕೆ.ನಾಯ್ಕ್ ಬಿನ್: ಕೆ.ಚಂದ್ರಕಾಂತ್ ನಾಯ್ಕ್, ಲಕ್ಷ್ಮಿದಾಮೋದರ ಮನೆ, ಕುಳಾಯಿ ಗ್ರಾಮ ಮತ್ತು ಅಂಚೆ, ಚಿತ್ರಾಪುರ, ಮಂಗಳೂರು.

**ಅರ್ಜಿದಾರರು**
1. ಶ್ರೀ ಗಣೇಶ್ ಎಸ್.ಭಟ್, ಬಿನ್: ವಾಸುದೇವ ಭಟ್, ಎಸ್.ವಿ.ಎಚ್. ಟೆಂಪಲ್ ಕಂಪೌಂಡ್, ಗುರುಪುರ.

**ಪ್ರಕರಣದ ಮುಖ್ಯಾಂಶಗಳು:**

ಅಬಕಾರಿ ಉಪ ನಿರೀಕ್ಷಕರು, ಇಐಬಿ, ದ.ಕ.ಜಿಲ್ಲೆ, ಮಂಗಳೂರುರವರು ದಿ:29.4.04 ರಂದು ರಾತ್ರಿ ಗಂಟೆ 10.15ಕ್ಕೆ ಮಂಗಳೂರು ತಾಲ್ಲೂಕು ಪಣಂಬೂರು ಮೀನಕಳಿಯದ ವೆಸ್ಟ್ ಫೋಸ್ಟ್ ಬ್ರೆವರೀಸ್ ಮುಂಭಾಗದಲ್ಲಿ ಆಟೋ ರಿಕ್ಷಾ ನೊಂದಣಿ ಸಂ:KA-19AC-3513 ಮತ್ತು ಕೆನೆಟಿಕ್ ಹೊಂಡಾ ಸ್ಕೂಟರ್ ಸಂ: KA-20H-6500 ರಲ್ಲಿ ಒಟ್ಟು 10 ರಟ್ಟಿನ ಪೆಟ್ಟಿಗೆಗಳಲ್ಲಿ 375 ಮಿಲಿಯ 240 ಬಾಟಲಿಗಳಲ್ಲಿ 90,000 ಲೀ ಅಕ್ರಮ ಮದ್ಯವನ್ನು ಹೊಂದಿ ಸಾಗಾಟ ಮಾಡುತ್ತಿದ್ದುದನ್ನು ಪತ್ತೆ ಹಚ್ಚಿ ಆರೋಪಿಗಳಾದ 1) ಶ್ರೀ ರಾಘವೇಂದ್ರ, ಬಿನ್: ಪಿ.ರಾಮ, 3ನೇ ಅವೆನ್ಯೂ ಡೋರ್ ನಂ:7, ಎನ್.ಎಂ.ಪಿ.ಟಿ ಕಾಲೋನಿ, ಪಣಂಬೂರು (ಆಟೋರಿಕ್ಷಾ ಚಾಲಕ) 2) ಆಟೋ ರಿಕ್ಷಾ ಮಾಲೀಕ–ಪತ್ತೆಹಚ್ಚಬೇಕಾಗಿದೆ. 3) ಶ್ರೀ ಅಮಿತ್ ಕೆ.ನಾಯ್ಕ್, ಬಿನ್: ಕೆ.ಚಂದ್ರಕಾಂತ್ ನಾಯ್ಕ್, ಲಕ್ಷ್ಮೀ ದಾಮೋದರ ಮನೆ, ಕುಳಾಯಿ ಗ್ರಾಮ ಮತ್ತು ಅಂಚೆ, ಚಿತ್ರಾಪುರ, ಮಂಗಳೂರು 4) ಶ್ರೀ ಗಣೇಶ್ ಎಸ್.ಭಟ್, ಬಿನ್: ವಾಸುದೇವ ಭಟ್, ಎಸ್.ವಿ.ಎಚ್. ಟೆಂಪಲ್ ಕಂಪೌಂಡ್, ಗುರುಪುರ (ಕೆನೆಟಿಕ್ ಹೊಂಡಾ

ಮಾಲೀಕ) ಇವರುಗಳು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 11, 14(2)ರ ಪ್ರಕಾರ ಅಪರಾಧ ಮಾಡಿದ್ದು, ಕಲಂ 34, 38ಎರ ಪ್ರಕಾರ ಶಿಕ್ಷಾರ್ಹವಾಗಿರುವುದರಿಂದ ಸದ್ರಿ ವಾಹನಗಳನ್ನು ಮತ್ತು 90.000 ಲೀ ಮದ್ಯವನ್ನು ಜಪ್ತಿಪಡಿಸಿಕೊಂಡು, ಆರೋಪಿಗಳ ವಿರುದ್ಧ ಪ್ರ.ಮಾ.ವ ಸಂಖ್ಯೆ 11/2003–04, ದಿನಾಂಕ: 29.04.04 ರಂದು ಮೊಕದ್ದಮೆಯನ್ನು ದಾಖಲಿಸಿಕೊಂಡು ಪ್ರಥಮ ಮಾಹಿತಿ ವರದಿಯನ್ನು ಮಾನ್ಯ ನ್ಯಾಯಾಲಯಕ್ಕೆ ಸಲ್ಲಿಸಿ, ಮೊಕದ್ದಮೆಯ ಸೊತ್ತುಗಳನ್ನು ಹಾಗೂ ಕಡತಗಳನ್ನು ಅಬಕಾರಿ ಉಪ ನಿರೀಕ್ಷಕರು, ಕೂಳೂರು ಉಪ ವಲಯ ಇವರಿಗೆ ಹಸ್ತಾಂತರಿಸಲು ಅಂದಿನ ಪ್ರಾಧಿಕಾರದಿಂದ ಅನುಮತಿಯನ್ನು ನೀಡಲಾಗಿರುತ್ತದೆ. ಇಲಾಖೆಯ ಪುನರ್‌ರಚನೆಯ ತರುವಾಯ ತಾಲ್ಲೂಕು ಜಾರಿ ಮತ್ತು ತನಿಖಾ ಕಛೇರಿ ಆರಂಭಗೊಂಡಿರುವುದರಿಂದ ಮೊಕದ್ದಮೆಯ ಸೊತ್ತು ಹಾಗೂ ಕಡತವನ್ನು ಅಧಿಕಾರ ವ್ಯಾಪ್ತಿಯ ಅಬಕಾರಿ ಉಪ ನಿರೀಕ್ಷಕರು, ಮಂಗಳೂರು ಉತ್ತರ ಜಾರಿ ಮತ್ತು ತನಿಖೆರವರಿಗೆ ಮುಂದಿನ ತನಿಖೆಗಾಗಿ ಹಸ್ತಾಂತರಗೊಂಡಿರುತ್ತದೆ.

ಮೇಲ್ಕಂಡ ಮೊಕದ್ದಮೆಯಲ್ಲಿ ಜಪ್ತಾದ ವಾಹನಗಳ ಪೈಕಿ ನೊಂದಣಿ ಸಂ: KA-19AC-3513 ಆಟೋರಿಕ್ಷಾವನ್ನು ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ಇಐಬಿ, ದ.ಕ.ಜಿಲ್ಲೆ, ಮಂಗಳೂರು ಇವರ ಪ್ರಾಧಿಕಾರದ ಆದೇಶ ಸಂ:ಎಸ್‌ಡಿಕೆ:285:ಡಿಟಿಸಿಆರ್:2003–04 ದಿ:13.2.2008 ರಂದು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗಿರುತ್ತದೆ.

ದಿನಾಂಕ:10.5.2004ರಂದು ಪ್ರಕರಣದಲ್ಲಿ ಜಪ್ತಿಪಡಿಸಿರುವ ವಾಹನಗಳ ಪೈಕಿ ಕೈನೈಟಿಕ್ ಹೊಂಡಾ ಸ್ಕೂಟರ್ ಸಂ: KA-20H-6500 ಇದರ ಆರ್.ಸಿ. ಮಾಲೀಕರೆಂದು ಹೇಳಿಕೊಂಡ ಶ್ರೀ ಗಣೇಶ್ ಎಸ್.ಭಟ್, ಬಿನ್: ವಾಸುದೇವ ಭಟ್, ಜಿ–3 ಆಶ್ರಯ ಎಪಾರ್ಟ್‌ಮೆಂಟ್, ಮಹಾಮ್ಮಾಯಿ ದೇವಸ್ಥಾನ ರಸ್ತೆ, ಕಾರ್‌ಸ್ಟ್ರೀಟ್, ಮಂಗಳೂರು ಇವರು ತಮ್ಮ ವಕೀಲರ ಮುಖಾಂತರ ಈ ಪ್ರಾಧಿಕಾರಕ್ಕೆ ಅರ್ಜಿಯೊಂದನ್ನು ಸಲ್ಲಿಸಿ ವಾಹನದ ಮಧ್ಯಂತರ ಬಿಡುಗಡೆಗೆ ಕೋರಿದ್ದು, ಈ ಪ್ರಾಧಿಕಾರವು ಅರ್ಜಿದಾರರ ಮಧ್ಯಂತರ ಬಿಡುಗಡೆಯ ಅರ್ಜಿಯನ್ನು ಪುರಸ್ಕರಿಸಿ ದಿ:9.8.2004ರ ಆದೇಶದಲ್ಲಿ ರೂ.7,000/– ಬ್ಯಾಂಕ್ ಗ್ಯಾರಂಟಿ ಭದ್ರತೆಯಾಗಿ ಪ್ರಾಧಿಕಾರಕ್ಕೆ ಒದಗಿಸುವ ಷರತ್ತಿಗೆ ಅನುಗುಣವಾಗಿ ವಾಹನವನ್ನು ವಾಹನದ ಆರ್.ಸಿ. ಮಾಲೀಕರ ಮಧ್ಯಂತರ ಸುಪರ್ಧಿಗೆ ಬಿಡುಗಡೆ ಮಾಡಿ ಆದೇಶ ನೀಡಿರುತ್ತದೆ.

ಈ ಪ್ರಕರಣದಲ್ಲಿ ಜಪ್ತು ಪಡಿಸಲಾಗಿದ್ದ ಮದ್ಯದ ಮಾದರಿಗಳನ್ನು ರಾಸಾಯನಿಕ ವಿಶ್ಲೇಷಣೆಗೆ ಒಳಪಡಿಸಿದ್ದು, ಮದ್ಯದ ಮದ್ಯಸಾರದ ಪ್ರಮಾಣ 43.0% ಇರುವುದೆಂದು ದೃಢೀಕೃತವಾಗಿದ್ದು ಹಾಗೂ ಮದ್ಯದ ಬಣ್ಣ ಮಾಸಿ ಹೋಗಿ, ಮಾನವನ ಸೇವನೆಗೆ ಅನುಕೂಲಕರವಾಗಿಲ್ಲವಾದ ಕಾರಣ ಜಪ್ತುಪಡಿಸಲಾದ 90.000 ಲೀ ಮದ್ಯವನ್ನು (ಮಾದರಿ ಹೊರತುಪಡಿಸಿ) ಈ ಪ್ರಾಧಿಕಾರದ ದಿ:13.2.2008ರ ಆದೇಶದಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು, ಮುಟ್ಟುಗೋಲು ಹಾಕಿಕೊಳ್ಳಲಾದ ಮದ್ಯವನ್ನು ನಾಶಪಡಿಸಲು ಆದೇಶಿಸಲಾಗಿರುತ್ತದೆ.

ಈ ಪ್ರಕರಣದಲ್ಲಿ ಜಪ್ತಾದ ಕೈನೈಟಿಕ್ ಹೊಂಡಾ ಸ್ಕೂಟರ್ ಸಂ: KA-20H-6500 ರ ವಾಹನದ ಮಾಲೀಕರಿಗೆ ಈ ಪ್ರಾಧಿಕಾರವು ದಿ:14.9.2004 ರಂದು ಕಾರಣ ಕೇಳಿ ನೋಟೀಸನ್ನು ನೀಡಲಾಗಿದ್ದು, ಸದ್ರಿ ನೋಟಿಸು ವಾಹನದ ಮಾಲೀಕರಿಗೆ ದಿ:21.9.04 ರಂದು ಜಾರಿಯಾಗಿದ್ದು, ಸದ್ರಿ ನೋಟಿಸಿಗೆ ವಾಹನದ ಮಾಲೀಕರು ದಿ:23.9.04ರಂದು ಪ್ರಾಧಿಕಾರಕ್ಕೆ ಉತ್ತರ ಸಲ್ಲಿಸಿ ತನ್ನ ವಾಹನವನ್ನು ಮನೆಯ ಶೆಡ್ಡಿನಲ್ಲಿ ಇಟ್ಟು ತಾನು ಮದುವೆಯ ನಿಮಿತ್ತ ಶಿವಮೊಗ್ಗಕ್ಕೆ ಹೋಗಿರುವ ಸಂದರ್ಭದಲ್ಲಿ ಸದ್ರಿ ವಾಹನವನ್ನು ಯಾರೋ ಕಳವು ಮಾಡಿ ಅಕ್ರಮದಲ್ಲಿ ತೊಡಗಿಸಿಕೊಂಡಿದ್ದು, ಈ ಅಕ್ರಮಕ್ಕೂ ತನಗೂ ಯಾವುದೇ ಸಂಬಂಧವಿಲ್ಲವೆಂದು ವಿವರಣೆ ನೀಡಿರುತ್ತಾರೆ. ಸದ್ರಿಯವರ ಹೇಳಿಕೆಯ ಸತ್ಯಾಸತ್ಯತೆಯನ್ನು ಪರಾಂಭರಿಸಲು ಪ್ರಾಧಿಕಾರದಲ್ಲಿ ಮುಟ್ಟುಗೋಲು ನಡವಳಿಯನ್ನು ನಡೆಸಲು ತೀರ್ಮಾನಿಸಲಾಯಿತು.

ನಂತರ ಪ್ರಕರಣದ ವಿಚಾರಣೆಯನ್ನು ಪ್ರಾರಂಭಿಸಿ ಸರ್ಕಾರದ ಪರ ಇಬ್ಬರು ಸಾಕ್ಷಿದಾರರನ್ನು ವಿಚಾರಣೆ ಮಾಡಿರುತ್ತಾರೆ. ಅಭಿಯೋಗದ ಪರ ಸಾಕ್ಷಿ ನೀಡಿದ ಶ್ರೀ ಯು.ಪ್ರಭಾಕರ, ಅಬಕಾರಿ ನಿರೀಕ್ಷಕರು, ಗುಪ್ತವಾರ್ತಾದಳ, ಮಂಗಳೂರು ಪ್ರಾ.ಸಾ–1: ಇವರು ತಾನು 1994 ರಿಂದ ಅಬಕಾರಿ ಗುಪ್ತ ವಾರ್ತದಳ ಮಂಗಳೂರು ಇಲ್ಲಿ ಅಬಕಾರಿ ಉಪ ನಿರೀಕ್ಷಕರಾಗಿ ಕೆಲಸ ನಿರ್ವಹಿಸುತ್ತಿದ್ದು, ದಿ:29.4.2004ರಂದು ರಾತ್ರಿ ಸಮಯ ಸಿಬ್ಬಂದಿಯವರೊಂದಿಗೆ ಮಂಗಳೂರು ತಾಲ್ಲೂಕು ಪಣಂಬೂರು ಬೀಚ್ ಪಕ್ಕದಲ್ಲಿ ಅಕ್ರಮ ಮದ್ಯ ಮಾರಾಟ ಹಾಗೂ ಸಾಗಾಟವನ್ನು ಪತ್ತೆ ಹಚ್ಚಲು ಗಸ್ತು ಕರ್ತವ್ಯದಲ್ಲಿದ್ದೆವು. ಆ ಸಮಯದಲ್ಲಿ ವೆಸ್ಟ್ ಪೋಸ್ಟ್‌ಬ್ರೆವರೇಜ್ ನ ಎದುರು ಭಾಗದ ಅಡ್ಡ ರಸ್ತೆಯ ಪಕ್ಕದಲ್ಲಿ ಒಂದು ಆಟೋರಿಕ್ಷಾ ಮತ್ತು ಸ್ಕೂಟರ್ ನಿಂತಿದ್ದು, ಅದರಲ್ಲಿ ಇಬ್ಬರು ವ್ಯಕ್ತಿಗಳು ಇದ್ದು, ಒಬ್ಬಾತ ಆಟೋರಿಕ್ಷಾದಿಂದ ಸ್ಕೂಟರ್‌ಗೆ ಒಂದು ರಟ್ಟಿನ ಪೆಟ್ಟಿಗೆಯನ್ನು ಹಸ್ತಾಂತರಿಸುವುದನ್ನು ಕಂಡು ಅನುಮಾನಗೊಂಡು ಪಕ್ಕದಲ್ಲಿ ಹೋಗಿ ನೋಡಲಾಗಿ ಸ್ಕೂಟರಲ್ಲಿ ಹಾಗೂ ರಿಕ್ಷಾದಲ್ಲಿ ರಟ್ಟಿನ ಪೆಟ್ಟಿಗೆಗಳು ಇರುವುದನ್ನು ನೋಡಿದೆವು ಎಂದೂ, ರಟ್ಟಿನ ಪೆಟ್ಟಿಗೆಗಳಲ್ಲಿ ಏನಿದೆ ಎಂದು ಕೇಳಲಾಗಿ ಸದ್ರಿ ವ್ಯಕ್ತಿಗಳು ಸಮರ್ಪಕವಾದ ಉತ್ತರವನ್ನು ನೀಡದೇ ಇದ್ದುದರಿಂದ ಕೂಡಲೇ ವಾಹನಗಳನ್ನು ತಪಾಸಣೆ ಮಾಡಬೇಕಾಗಿ ಬಂದುದ್ದರಿಂದ ಈ ಬಗ್ಗೆ ನ್ಯಾಯಾಲಯದಿಂದ ವಾರೆಂಟ್ ತರಲು ಕಾಲವಕಾಶವಿಲ್ಲದ ಕಾರಣ ಸರ್ಚ್‌ಮೆಮೋ ಒಂದನ್ನು ತಯಾರಿಸಿ ರಿಕ್ಷಾವನ್ನು ಶೋಧನೆ ಮಾಡಿದಾಗ ರಿಕ್ಷಾದಲ್ಲಿ ಪ್ರಯಾಣಿಕರು ಕೂರುವ ಸೀಟಿನ ಮೇಲೆ 8 ರಟ್ಟಿನ ಪೆಟ್ಟಿಗೆಗಳು ಇದ್ದವು ಎಂದೂ, ಅದನ್ನು ತೆರೆದು ನೋಡಿದಾಗ ಪ್ರತಿಯೊಂದು ರಟ್ಟಿನ ಪೆಟ್ಟಿಗೆಯಲ್ಲಿ ತಲಾ 2 ಬಾಟಲಿಗಳಂತೆ 375 ಎಂಎಲ್ ಗಾತ್ರದ ರಾಕೇಟ್ ವಿಸ್ಕಿ ಎಂಬ ಬ್ರಾಂಡಿನ ಬಾಟಲಿಗಳು ಇದ್ದವು ಎಂದೂ, ಸದ್ರಿ ಮದ್ಯ ತುಂಬಿದ ಪೆಟ್ಟಿಗೆಗಳನ್ನು ಸ್ವಾಧೀನದಲ್ಲಿಟ್ಟುಕೊಳ್ಳಲು ಮತ್ತು ಸಾಗಾಟ ಮಾಡಲು ಸದ್ರಿ ವ್ಯಕ್ತಿಗಳಲ್ಲಿ ಯಾವುದೇ ದಾಖಲೆಗಳು ಇರಲಿಲ್ಲವೆಂದು ಮಹಜರು ಸ್ಥಳಕ್ಕೆ ಸ್ಥಳೀಯರನ್ನು ಸಾಕ್ಷಿದಾರರನ್ನು ಕರೆದು ತರಲು ಪ್ರಯತ್ನಿಸಲಾದರೂ ಯಾರೂ ಸಿಕ್ಕಲಿಲ್ಲವೆಂದೂ ನಂತರ ಸ್ಥಳದಲ್ಲಿ ಸಿಬ್ಬಂದಿಯವರನೇ ಸಾಕ್ಷಿದಾರರನ್ನಾಗಿ ಇಟ್ಟುಕೊಂಡು ಎರಡು ವಾಹನಗಳಲ್ಲಿದ್ದ 10 ರಟ್ಟಿನ ಪೆಟ್ಟಿಗೆಗಳಲ್ಲಿದ್ದ ತಲಾ 1 ರಂತೆ 10

ಬಾಟಲಿಗಳನ್ನು ಮಾದರಿಯಾಗಿ ಪ್ರತ್ಯೇಕಿಸಿ ಬಾಟಲಿಗಳ ಬಾಯಿಗೆ ಬಟ್ಟೆದಾರ ಕಟ್ಟಿ ಇಲಾಖಾ ಸೀಲು ಮಾಡಿ ಮುದ್ರಿಸಿದೆವು ಎಂದು, ಸ್ಥಳದಲ್ಲಿ ಮಾದರಿ ಸೀಲನ್ನು ತಯಾರಿಸಿ ಮಾದರಿ ಸೀಸೆಗಳಿಗೆ ಆರೋಪಿತರ ಹೆಸರು ವಿಳಾಸವಿರುವ ಗುರುತಿನ ಚೀಟಿಗಳನ್ನು ಅಂಟಿಸಲಾಯಿತ್ತೆಂದು, ಸ್ಥಳದಲ್ಲಿದ್ದ 2 ವಾಹನ ನೊಂದಣಿ ಸಂಖ್ಯೆಗಳನ್ನು ಮಹಜರಿನಲ್ಲಿ ನಮೂದಿಸಿ ಕೊಳ್ಳಲಾಯಿತ್ತು, ರಿಕ್ಷಾದ ಎದುರು ಭಾಗದಲ್ಲಿ ಗ್ಲಾಸಿನ ಕೆಳಗಡೆ ಹಳದಿ ಬಣ್ಣ ಬಳಿದು ದುರ್ಗಾಂಭ ಎಂದು ಆಂಗ್ಲ ಭಾಷೆಯಲ್ಲಿ ಬರೆಯಲಾಗಿದ್ದು, ಅದರ ಕೆಳಭಾಗದಲ್ಲಿ ಶ್ರೀ ನಂದನೇಶ್ವರ ಎಂದು ಗ್ಲಾಸಿನ ಮೇಲ್ಭಾಗದಲ್ಲಿ ಜೈ ಮಾರುತಿ ಎಂದು ಬರೆಯಲಾಗಿತ್ತೆಂದೂ, ಸ್ಥಳದಲ್ಲಿ ಮಹಜರನ್ನು ತಯಾರಿಸಲಾಗಿತ್ತೆಂದೂ, ರಿಕ್ಷಾಕ್ಕೆ ಸಂಬಂಧಿಸಿದ ಆರ್.ಸಿ. ಪುಸ್ತಕ ಅಲ್ಲಿ ಇರಲಿಲ್ಲ, ಸ್ಕೂಟರಿಗೆ ಸಂಬಂಧಿಸಿದ ಆರ್.ಸಿ. ಪುಸ್ತಕ ಮತ್ತು ಟಾಕ್ಸ್ ಕಾರ್ಡು ಇತ್ತೆಂದು ಅವುಗಳನ್ನು ವಶಕ್ಕೆ ತೆಗೆದುಕೊಂಡು ಸ್ಥಳದಲ್ಲಿದ್ದ 2 ವಾಹನವನ್ನು ಮತ್ತು ಮದ್ಯ ತುಂಬಿದ ರಟ್ಟಿನ ಪೆಟ್ಟಿಗೆಗಳನ್ನು ಜಪ್ತುಪಡಿಸಿಕೊಂಡು 2 ಜನ ಆರೋಪಿತರನ್ನು ವಶಕ್ಕೆ ತೆಗೆದುಕೊಂಡು ಸೊತ್ತು ಸಮೇತ ಕಛೇರಿಗೆ ಬಂದೆವು, ಅಲ್ಲಿ ಪ್ರ.ಮಾ. ವರದಿ ಸಂ: 11/2003–04ರ ಪ್ರಕಾರ ವರದಿಯನ್ನು ತಯಾರಿಸಿ ಮಾನ್ಯ ನ್ಯಾಯಾಲಯಕ್ಕೆ ಹಾಗೂ ಪ್ರತಿಯನ್ನು ಮೇಲಾಧಿಕಾರಿಗಳಿಗೆ ಸಲ್ಲಿಸಿರುತ್ತೇನೆ, ಶ್ರೀ ಎಂ.ಆರ್. ರಾಮದಾಸ್ ಇವರ ಮುಖಾಂತರ ದಿ:22.5.2004ರಂದು ಮಾದರಿ ಸೀಸೆಗಳನ್ನು ರಾಸಾಯನಿಕ ತಜ್ಞರ ಪರೀಕ್ಷೆಗೆ ಕಳುಹಿಸಿರುತ್ತೇನೆ. ದಿ:8.10.2004 ರಂದು ತಜ್ಞರು ಪರೀಕ್ಷಿಸಿದ ಮಾದರಿ ಸೀಸೆಗಳನ್ನು ಮತ್ತು ವರದಿಯನ್ನು ಸ್ವೀಕರಿಸಿರುತ್ತೇನೆ. ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್ ದ.ಕ.ಜಿಲ್ಲೆ, ಮಂಗಳೂರು ಇವರಿಗೆ ದಿ:6.5.2004 ರಂದು ಒಂದು ವರದಿಯನ್ನು ಸಲ್ಲಿಸಿ, ವಶಪಡಿಸಿಕೊಂಡಿರುವ ಸೊತ್ತುಗಳನ್ನು ತಮ್ಮ ಸ್ವಾಧೀನದಲ್ಲಿಟ್ಟುಕೊಳ್ಳಲು ಅನುಮತಿ ಕೋರಿ ಹಾಗೂ ದಿ:22.2.2005 ರಂದು ಇನ್ನೊಂದು ವರದಿಯನ್ನು ಸಲ್ಲಿಸಿ ಮದ್ಯದ ಬಾಟಲಿಗಳನ್ನು ವಿಲೇವಾರಿ ಮಾಡಲು ಅನುಮತಿ ಕೋರಿರುತ್ತೇನೆ. ಸಾಕ್ಷಿ ವಿಚಾರಣೆ ವೇಳೆಯಲ್ಲಿ ಪ್ರಾ.ಸಾ–1ರವರು ಪ್ರಾಧಿಕಾರದ ಮುಂದೆ ಸಾಕ್ಷ್ಯ ನೀಡುತ್ತಾ, ಅಧಿಕೃತ ಅಧಿಕಾರಿಗಳಿಗೆ ಬರೆದ ವರದಿಯನ್ನು ನಿಶಾನೆ ಪಿ–1 ಎಂದೂ, ಮಹಜರು ಪ್ರತಿಯನ್ನು ನಿಶಾನೆ ಪಿ–2 ಎಂದೂ, ಪ್ರ.ವ.ವರದಿಯನ್ನು ನಿಶಾನೆ ಪಿ–3 ಎಂದೂ, ರಾಸಾಯನಿಕ ತಜ್ಞರು ನೀಡಿದ ವಿಶ್ಲೇಷಣಾ ವರದಿಯನ್ನು ನಿಶಾನೆ ಪಿ–4 ಎಂದೂ, ಮಾದರಿ ಸೀಲನ್ನು ನಿಶಾನೆ ಪಿ–5 ಎಂದೂ, ಸಾಕ್ಷಿ ವಿಚಾರಣೆ ವೇಳೆಯಲ್ಲಿ ಪಿಡಬ್ಲ್ಯೂ–1 ರವರು ನೋಡಿ ಗುರುತಿಸಿರುತ್ತಾರೆ.

ಸಾಕ್ಷಿದಾರರು ವಾಹನ KA-20H-6500 ಇದರ ಮಾಲೀಕರ ಪರ ವಕೀಲರ ಪಾಟಿ ಸವಾಲಿಗೆ ಉತ್ತರಿಸುತ್ತಾ ಮಹಜರನ್ನು ತಯಾರಿಸುವ ಸಮಯದಲ್ಲಿ ಸ್ಥಳದ ಚೆಕ್ ಬಂದಿಯನ್ನು ಮಹಜರಿನಲ್ಲಿ ಬರೆದಿರುವುದಿಲ್ಲ. ಮಹಜರು ಸಮಯದಲ್ಲಿ ಹಾಜರಿದ್ದ ನಮ್ಮ ಸಿಬ್ಬಂದಿಗಳ ಸಂಪೂರ್ಣ ವಿವರವನ್ನು ಮಹಜರಿನಲ್ಲಿ ನಾನು ಬರೆದಿರುವುದಿಲ್ಲ, ತಕ್ಷೀರು ಸ್ಥಳಕ್ಕೆ ಹೋಗುವ ಮುನ್ನ ತಕ್ಷೀರಿನ ಬಗ್ಗೆ ಯಾವುದೇ ಪೂರ್ವ ಮಾಹಿತಿ ಇರಲಿಲ್ಲ, ತಕ್ಷೀರು ಸ್ಥಳಕ್ಕೆ ಇಲಾಖಾ ಜೀಪಿನಲ್ಲಿ ಹೋಗಿರುತ್ತೇವೆ, ಇಲಾಖಾ ಜೀಪಿನಲ್ಲಿ ಹೋದ ವಿಷಯವನ್ನು ಮಹಜರಿನಲ್ಲಿ ನಮೂದಿಸಿಲ್ಲವೆಂದರೆ ಸರಿ, ನಾವು ಒಟ್ಟು 5 ಜನ ಸಿಬ್ಬಂದಿಗಳು ಇದ್ದೆವು. ಅದರಲ್ಲಿ ಇಬ್ಬರ ಹೆಸರು ನೆನಪಿಲ್ಲ. ಇಲಾಖಾ ಜೀಪಿನ ಚಾಲಕ ಹೆಸರು ಈಗ ನೆನಪಿಲ್ಲ. ಇಲಾಖಾ ಜೀಪಿನಲ್ಲಿ ನಾವು ಹೊರಡುವಾಗ ರಾತ್ರಿ 8–00 ಗಂಟೆಯಾಗಿತ್ತು. ತಕ್ಷೀರು ಸ್ಥಳಕ್ಕೆ ತಲುಪುವಾಗ ಸಾಧಾರಣ 10–15 ಕಿ.ಮಿ ದೂರ ಬೇರೆ ಕಡೆ ಕ್ರಮಿಸಿದ್ದೇವೆ. ಆ ದಿನ ಈ ಪ್ರಕರಣಕ್ಕೆ ಸಂಬಂಧಿಸಿದ ವಾಹನ ಮತ್ತು ಸ್ಕೂಟರನ್ನು ಹೊರತುಪಡಿಸಿ, ಬೇರೆ ಯಾವುದೇ ಅಕ್ರಮ ವಶಪಡಿಸಿಕೊಂಡಿಲ್ಲ. ಆ ದಿನ ನಾವು ದಕ್ಷಿಣದಿಂದ ಉತ್ತರಕ್ಕೆ ರಸ್ತೆಯಲ್ಲಿ ಹೋಗುತ್ತಿದ್ದೇವು. ಸದ್ರಿ ರಸ್ತೆಯ ಹೆಸರು ಗೊತ್ತಿಲ್ಲ. ಈ ಪ್ರಕರಣಕ್ಕೆ ಸಂಬಂಧಿಸಿದ ವಾಹನ ಹಾಗೂ ಆರೋಪಿತರು ಪಶ್ಚಿಮ ರಸ್ತೆಯಲ್ಲಿ ನಿಂತಿದ್ದರು. ಆಜಾಗವು ಪಕ್ಕದ ಮಣ್ಣಿನ ರಸ್ತೆಯ ಮೇಲಿತ್ತು. 2 ವಾಹನಗಳು ಪಶ್ಚಿಮಕ್ಕೆ ಮುಖ ಮಾಡಿ ನಿಂತಿದ್ದವು. ಮೀನಕಳಿಯ ಎಂಬಲ್ಲಿ ಎಷ್ಟು ರಸ್ತೆಗಳಿವೆ ಎಂಬುದು ಗೊತ್ತಿಲ್ಲ. ಮೀನಕಳಿಯ ಎಂಬುವುದು ಒಂದು ಸ್ಥಳದ ಹೆಸರು, ಸದ್ರಿ ರಸ್ತೆಯು ಎಷ್ಟನೇ ಅಡ್ಡರಸ್ತೆ ಎಂಬುವುದು ಗೊತ್ತಿಲ್ಲ. ತಕ್ಷೀರು ಸ್ಥಳದ ಸ್ವಲ್ಪ ದೂರದಲ್ಲಿ ಮನೆಗಳು ಇದ್ದವು. ಆ ಸಮಯದಲ್ಲಿ ಕೇಂದ್ರ ಸರ್ಕಾರದ ಸಿ.ಐ.ಎಸ್ ಪಡೆಗಳ ಕಛೇರಿಗಳು ಇರಲಿಲ್ಲ. ತಕ್ಷೀರು ಸ್ಥಳದಿಂದ 2 ಕಿ.ಮೀ. ದೂರದಲ್ಲಿ ಪೊಲೀಸ್ ಠಾಣೆ ಇರುತ್ತದೆ. ಸ್ಥಳದಲ್ಲಿ 2–3 ಗಜ ಅಂತರದಲ್ಲಿ ಇರುವ ಒಂದು ದಾರಿ ದೀಪದ ಅಡಿಯಲ್ಲಿ ನಿಂತು ಮಹಜರು ಬರೆದಿರುತ್ತೇನೆ. ಸ್ವತಂತ್ರ ಸಾಕ್ಷಿದಾರರು ಯಾರು ಬರಲಿಲ್ಲ, ಹೆಸರು ವಿಳಾಸವನ್ನು ಸಹಾ ಬರೆದುಕೊಂಡಿಲ್ಲ. ವೆಸ್ಟ್ ಕೋಸ್ಟ್ ಬ್ರೆವರೇಜ್ ಅದು ಒಂದು ಡಿಸ್ಟಿಲರಿ ಎಂದರೆ ನಿಜ, 2004ರಲ್ಲಿ ಸದ್ರಿ ಡಿಸ್ಟಿಲರಿಯಲ್ಲಿ ಸಾಕಷ್ಟು ಸಿಬ್ಬಂದಿಗಳು ಇದ್ದರು ಎನ್ನುವುದು ಸರಿಯಲ್ಲ ಅದನ್ನು ಆ ಸಮಯದಲ್ಲಿ ಮುಚ್ಚಲಾಗಿತ್ತು. ಸದ್ರಿ ಡಿಸ್ಟಿಲರಿ ಒಂದು ವಿಶಾಲವಾದ ಸ್ಥಳವಿದ್ದು, ಅಲ್ಲಿ ಒಂದು ಎಕ್ಸೈಜ್ ಗೋಡೌನ್ ಇರಬಹುದು ಆದರೆ ನಾನು ಅಲ್ಲಿಗೆ ಹೋಗಲಿಲ್ಲ. ಸಾಮಾನ್ಯವಾಗಿ ಎಕ್ಸೈಜ್ ಗೋಡೌನ್‌ನಲ್ಲಿ ಅಬಕಾರಿ ವಸ್ತುಗಳು ಇರುತ್ತದೆ ಎಂದರೆ ಸರಿ, ವಶಪಡಿಸಿಕೊಂಡ ರಟ್ಟಿನ ಪೆಟ್ಟಿಗೆಗಳಲ್ಲಿ ಕ್ರಮ ಸಂಖ್ಯೆ ಮತ್ತು ಮೊಕದ್ದಮೆ ಸಂಖ್ಯೆ ನಮೂದಿಸಿರುತ್ತೇನೆ, ಮಾದರಿ ಸೀಸೆಗಳಿಗೆ ಕ್ರಮ ಸಂಖ್ಯೆ ಮತ್ತು ಮೊಕದ್ದಮೆ ಸಂಖ್ಯೆ ನಮೂದಿಸಿರುತ್ತೇನೆ. ಕ್ರಮ ಸಂಖ್ಯೆ ಮತ್ತು ಮೊಕದ್ದಮೆ ಸಂಖ್ಯೆ ಯಾದಾಸ್ತಿನಲ್ಲಿ ನಮೂದಿಸಿರುವುದಿಲ್ಲ. ವಶಪಡಿಸಿಕೊಂಡ ವಾಹನಗಳ ನೊಂದಣಿ ಮಾಲೀಕರು ಯಾರು ಎಂಬುವುದು ನಂತರ ಗೊತ್ತಾಯಿತು. ಪ್ರಕರಣದಲ್ಲಿ ಅವರನ್ನು ಕರೆಯಿಸಿ ವಿಚಾರಣೆ ಮಾಡಿಲ್ಲ. ಸ್ಕೂಟರಿನ ನೊಂದಣಿ ಮಾಲೀಕರನ್ನು ಆರೋಪಿಯೆಂದು ನೋಂದಣಿ ಮಾಲೀಕರಾದ ಕಾರಣ ನಮೂದಿಸಿರುತ್ತೇನೆ. ಗಣೇಶ್ ಭಟ್ ಎಂಬುವರ ವಿರುದ್ದ ವಾಹನಕ್ಕೆ ಸಂಬಂಧಿಸಿದ ಆರ್.ಸಿ. ಪುಸ್ತಕ ಹೊರತುಪಡಿಸಿ, ಬೇರೆ ಯಾವುದೇ ಸಾಕ್ಷ್ಯಾಧಾರ ಲಭ್ಯವಿಲ್ಲವೆಂದರೆ ಸರಿ. ನಾನು ಆ ದಿವಸ ಮೀನಕಳಿಯ ಎಂಬ ಸ್ಥಳಕ್ಕೆ ಹೋದದ್ದೆ ಇಲ್ಲ ಎನ್ನುವುದು ಸರಿಯಲ್ಲ. ತಕ್ಷೀರು ಸ್ಥಳದಲ್ಲಿ ಯಾವುದೇ ಮಹಜರು ಮಾಡಿಲ್ಲ ಎನ್ನುವುದು ಸರಿಯಲ್ಲ, ಮಹಜರನ್ನು ನಮ್ಮ ಕಛೇರಿಯಲ್ಲಿ ತಯಾರಿಸಿರುತ್ತೇನೆ ಎನ್ನುವುದು ಸರಿಯಲ್ಲ, ಆದಿನ ವಾಹನಗಳಿಂದ ಯಾವುದೇ ಮದ್ಯದ ಬಾಟಲಿಗಳನ್ನು ವಶಪಡಿಸಿಕೊಂಡಿಲ್ಲ ಎನ್ನುವುದು ಸರಿಯಲ್ಲ, ವಾಹನಗಳ ವಿರುದ್ದ ಸುಳ್ಳು ಮೊಕದ್ದಮೆ ದಾಖಲಿಸಿರುತ್ತೇನೆ

ಎನ್ನುವುದು ಸರಿಯಲ್ಲ. ನಾವು ವಶಪಡಿಸಿಕೊಂಡ ಮದ್ಯದ ಬಾಟಲಿಗಳನ್ನು ನಮ್ಮ ಕಛೇರಿಯಲ್ಲಿ ಇಟ್ಟಿರುತ್ತೇನೆ ಎಂದರೆ ಸರಿ, ಬೇರೆ ಪ್ರಕರಣಗಳಲ್ಲಿ ವಶಪಡಿಸಿಕೊಂಡ ಮದ್ಯದ ಬಾಟಲಿಗಳನ್ನು ಈ ಪ್ರಕರಣಕ್ಕೆ ಅಳವಡಿಸಿ ಸುಳ್ಳು ಪ್ರಕರಣವನ್ನು ಸೃಷ್ಟಿ ಮಾಡಿರುತ್ತೇನೆ ಎನ್ನುವುದು ಸರಿಯಲ್ಲ.

ಅಭಿಯೋಗದ ಪರ ಸಾಕ್ಷಿ ನೀಡಿದ ಶ್ರೀ ಎಂ.ಆರ್. ರಾಮದಾಸ್, ಅಬಕಾರಿ ಮುಖ್ಯ ರಕ್ಷಕ, ಗುಪ್ತ ವಾರ್ತಾದಳ, ಮಂಗಳೂರು ಪ್ರಾ.ಸಾ–2: ಇವರು ಸಾಕ್ಷಿ ನೀಡುತ್ತಾ ನಾನು ಮಂಗಳೂರು ಗುಪ್ತ ವಾರ್ತಾದಳದಲ್ಲಿ ಅಬಕಾರಿ ಮುಖ್ಯ ರಕ್ಷಕನಾಗಿ ಈಗ ಕೆಲಸ ನಿರ್ವಹಿಸುತ್ತಿದ್ದೇನೆ ಎಂದೂ, ದಿ:22.5.2004 ರಂದು 10 ಕೆಮಿಕಲ್ ಬಾಟಲಿ 375 ಮಾದರಿ ಸೀಸೆಗಳನ್ನು ಅಬಕಾರಿ ನಿರೀಕ್ಷಕರಿಂದ ಪಡೆದುಕೊಂಡು ಅದೇ ದಿನ ಮಂಗಳೂರು ರಾಸಾಯನಿಕ ವಿಶ್ಲೇಷಕರ ಕಛೇರಿಗೆ ತಲುಪಿಸಿರುತ್ತೇನೆ. ದಿನಾಂಕ 8.10.2004 ರಂದು ರಾಸಾಯನಿಕ ತಜ್ಞರು ಪರೀಕ್ಷಿಸಿದ ಸದ್ರಿ ಮಾದರಿ ಸೀಸೆಗಳನ್ನು ಮತ್ತು ವರದಿಯನ್ನು ತಮ್ಮ ಕಛೇರಿಗೆ ತಲುಪಿಸಿರುತ್ತೇನೆ. ಪ್ರಕರಣದಲ್ಲಿ ಪಾಟೀಸವಾಲಿಗೆ ಉತ್ತರಿಸುತ್ತಾ ಮಾದರಿ ಸೀಸೆಗಳನ್ನು ಪಡೆಯುವ ಸಮಯ ಸದ್ರಿ ಮಾದರಿ ಸೀಸೆಗಳನ್ನು ಯಾವ ತಕ್ಷೀರಿಗೆ ಸಂಬಂಧಿಸಿದ್ದು ಎಂಬುವುದು ನನಗೆ ಮೊದಲೇ ತಿಳಿದಿತ್ತು. ತಕ್ಷೀರಿನ ಸ್ಥಳಕ್ಕೆ ನಾನು ಹೋಗಿದ್ದೆ, ಈ ಪ್ರಕರಣಕ್ಕೆ ಸಂಬಂಧಿಸಿದ ಮಹಜರಿಗೆ ನಾನು ಸಹಿ ಮಾಡಿರುತ್ತೇನೆ. ಪ್ರಕರಣಕ್ಕೆ ಸಂಬಂಧಿಸಿದ ಮಾದರಿ ಸೀಸೆಗಳನ್ನು ನಾನು ಕೊಂಡೊಯ್ದಿಲ್ಲ ಎನ್ನುವುದು ಸರಿಯಲ್ಲ. ಮಹಜರಿಗೆ ನಾನು ಕಛೇರಿಯಲ್ಲಿ ಸಹಿ ಮಾಡಿರುತ್ತೇನೆ ಎನ್ನುವುದು ಸರಿಯಲ್ಲ ಎಂದು ಪ್ರಾ.ಸಾ–2 ರವರು ಪ್ರಾಧಿಕಾರದ ಮುಂದೆ ನುಡಿದಿರುತ್ತಾರೆ.

ಅಭಿಯೋಗದ ಪರ ಸಾಕ್ಷಿ ವಿಚಾರಣೆಯನ್ನು ದಿ: 21.4.2005 ರಂದು ಕೊನೆಗೊಳಿಸಿ ನಂತರದಲ್ಲಿ ಪ್ರತಿ ರಕ್ಷೆ ಸಾಕ್ಷಿ ವಿಚಾರಣೆಯನ್ನು ದಿ:30.07.2008 ರಂದು ನಡೆಸಲಾಗಿ KA-20H-6500 ಕೆನೆಟಿಕ್ ಹೊಂಡಾ ಇದರ ಮಾಲೀಕರಾದ ಶ್ರೀ ಗಣೇಶ್ ಭಟ್ ಇವರನ್ನು ವಿಚಾರಣೆ ನಡೆಸಲಾಗಿ ಸದ್ರಿಯವರು ಸಾಕ್ಷಿ ನೀಡುತ್ತಾ ನಾನು ಗೌಡ ಸ್ವರಸ್ವತ ಬ್ರಾಹ್ಮಣನಾಗಿದ್ದು, ಪೌರೋತ್ಯ ಕೆಲಸ ಮಾಡುತ್ತಿರುತ್ತೇನೆ. ನಾನು ಕೈನೆಟಿಕ್ ಹೊಂಡಾ ಸ್ಕೂಟರ್ ಸಂ: KA-20H-6500 ಇದರ ಮಾಲೀಕರನಾಗಿರುತ್ತೇನೆ. ನಾನು ಸದ್ರಿ ಸ್ಕೂಟರನ್ನು ಪೂಜೆ ಸಮಾರಂಭಗಳಿಗೆ ಹೋಗಲು ಮತ್ತು ಸಾಮಾನು ಕೊಂಡು ಹೋಗಲು ಅಗತ್ಯಕ್ಕಾಗಿ ಖರೀದಿಸಿಕೊಂಡಿರುತ್ತೇನೆ. ನನ್ನ ಮನೆಯ ಎದುರಿನ ಶೆಡ್ಡಿನಲ್ಲಿ ಆ ಸ್ಕೂಟರನ್ನು ಯಾವಾಗಲೂ ಇರಿಸುತ್ತಿದ್ದೆ. ಶೆಡ್ಡನ್ನು ಸ್ಕೂಟರ್ ನಿಲ್ಲಿಸುವ ಸಲುವಾಗಿಯೇ ರಚಿಸಲಾಗಿರುತ್ತದೆ. ನಾನುದೂರದ ಸ್ಥಳಗಳಲ್ಲಿಯೂ ಪೌರೋತ್ಯ ಕೆಲಸಕ್ಕಾಗಿ ಹೋಗುತ್ತಿದ್ದೆ. ನಾನು ದಿ:27.04.2004ರಂದು ಶಿವಮೊಗ್ಗಕ್ಕೆ ಶ್ರೀಗೋಪಾಲಕೃಷ್ಣ ಭಟ್ ಎಂಬುವರ ಮನೆಗೆ ಮದುವೆ ಕಾರ್ಯಕ್ಕೆ ಸದ್ರಿ ಸ್ಕೂಟರನ್ನು ಮನೆಯಲ್ಲಿಯೇ (ಶೆಡ್ಡಿನಲ್ಲಿ) ಇರಿಸಿ ಹೋಗಿರುತ್ತೇನೆ. ನಾನು ದಿ:1.5.2004ರಂದು ಶಿವಮೊಗ್ಗದಿಂದ ವಾಪಾಸ್ಸು ಮಹಾಮಾಹಿ ದೇವಸ್ಥಾನದ ಬಳಿಯಿರುವ ಆಶ್ರಯ ಎಪಾರ್ಟ್‌ಮೆಂಟ್‌ನಲ್ಲಿರುವ ನನ್ನ ಮನೆಗೆ ಬಂದಿರುತ್ತೇನೆ. ನಾನು ವಾಪಾಸ್ಸು ಬಂದು ನೋಡಲಾಗಿ ನಾನು ನಿಲ್ಲಿಸಿ ಹೋದ ಸ್ಥಳದಲ್ಲಿ ನನ್ನ ಸ್ಕೂಟರ್ ಇರಲಿಲ್ಲ. ನಾನು ಬಂದು ಸ್ಕೂಟರಿನ ಬಗ್ಗೆ ಅಕ್ಕಪಕ್ಕದವರನ್ನು ವಿಚಾರಿಸಿದಾಗ ನನ್ನ ಸ್ಕೂಟರ್ ಅಬಕಾರಿ ಮೊಕದ್ದಮೆಗೆ ಸಂಬಂಧಿಸಿ ವಾಹನವನ್ನು ಜಪ್ತುಪಡಿಸಲಾಗಿದೆಯೆಂದು ದಿನಪತ್ರಿಕೆಯ ಸುದ್ದಿಯ ಮೂಲಕ ತಿಳಿದಿದ್ದೇವೆ ಎಂದು ತಿಳಿಸಿದರು. ನಂತರ ನಾನು ದಿ: 10.05.2004ರಂದು ವಾಹನದ ಮಧ್ಯಂತರ ಬಿಡುಗಡೆಗಾಗಿ ವಕೀಲರ ಮೂಲಕ ಅರ್ಜಿ ಸಲ್ಲಿಸಿರುತ್ತೇನೆ. ಸದ್ರಿ ಸ್ಕೂಟರ್ ಕೊಂಡು ಹೋಗಿರುವವರ ಪರಿಚಯ ನನಗೆ ಇರುವುದಿಲ್ಲ. ಸದ್ರಿ ಸ್ಕೂಟರಿನಲ್ಲಿ ಸಾಗಾಟ ಮಾಡಿರುವ ಮದ್ಯದ ಬಗ್ಗೆ ನನಗೆ ಯಾವುದೇ ಸಂಬಂಧ ಇರುವುದಿಲ್ಲ. ಸದ್ರಿ ಮೊಕದ್ದಮೆಗೆ ಸಂಬಂಧಿಸಿದ ಅಪರಾಧಕ್ಕೆ ನಾನು ಪ್ರತ್ಯಕ್ಷ ಅಥವಾ ಪರೋಕ್ಷವಾಗಿ ನನ್ನ ಸಂಬಂಧ ಇರುವುದಿಲ್ಲ. ನಾನು ಯಾವುದೇ ಅಪರಾಧವೆಸಗಿರುವುದಿಲ್ಲ ಹಾಗೂ ನನ್ನ ವಾಹನವನ್ನು ಸದ್ರಿ ಅಪರಾಧಕ್ಕೆ ಉಪಯೋಗಿಸಲು ಕಾರಣ ಕರ್ತನಾಗಿರುವುದಿಲ್ಲ. ಕಾರಣ ಮಧ್ಯಂತರ ಬಿಡುಗಡೆಗೊಳಿಸಿರುವ ನನ್ನ ವಾಹನವನ್ನು ಖಾಯಂಗೊಳಿಸಿ ಬಿಡುಗಡೆಗೊಳಿಸಬೇಕಾಗಿ ಈ ಪ್ರಾಧಿಕಾರದ ಮುಂದೆ ವಿನಂತಿಸಿಕೊಳ್ಳುತ್ತೇನೆ.

**ಪಾಟೀ ಸವಾಲು:** ನಾನು ಸದ್ರಿ ವಾಹನವನ್ನು ಈ ಪ್ರಕರಣ ಸಂಭವಿಸುವ ಸುಮಾರು 6 ತಿಂಗಳು ಹಿಂದಿನಿಂದ ಹೊಂದಿರುತ್ತೇನೆ. ನಾನು ದಿ:27.4.2004 ರಂದು ಶಿವಮೊಗ್ಗಕ್ಕೆ ತೆರಳಿದಾಗ ನನ್ನ ವಾಹನವನ್ನು ನಾನು ವಾಸವಾಗಿರುವ ಪ್ಲಾಟಿನ ನೆಲಅಂತಸ್ತಿನಲ್ಲಿರುವ ಕಾರು ಪಾರ್ಕಿಂಗ್ ಸ್ಥಳದಲ್ಲಿ ನಿಲುಗಡೆ ಮಾಡಿ ಹೋಗಿರುತ್ತೇನೆ. ನಾನು ಹೋಗುವಾಗ ವಾಹನಕ್ಕೆ ಸ್ಟೇರಿಂಗ್ ಬೀಗ ಹಾಕಿ ಹೋಗಿದ್ದೆ. ನಾನು ಹೊರಗಡೆ ಹೋಗುವಾಗ ವಾಹನದ ಉಸ್ತುವಾರಿ ನೋಡಿಕೊಳ್ಳಲು ಯಾರನ್ನು ನೇಮಿಸಿರುವುದಿಲ್ಲ. ನಾನುನಿಲ್ಲಿಸಿದ ವಾಹನದ ಸ್ಥಳ ನನ್ನ ಪ್ಲಾಟಿನ ಕಾಂಪೌಂಡಿನ ಹೊರಗಡೆಯಿಂದ ಸಾಗುವ ಜನರಿಗೆ ಕಾಣುವಂತಾಗಿರುತ್ತದೆ. ನಾನು ದಿ:1.5.2004ರಂದು ಊರಿಗೆ ಹಿಂತಿರುಗಿ ಬಂದಾಗ ನನ್ನ ಸ್ಕೂಟರ್ ಮಾಯವಾಗಿರುವುದನ್ನು ತಿಳಿದಿರುತ್ತೇನೆ. ಆದರೆ ನನ್ನ ಸ್ಕೂಟರ್ ಕಳೆದು ಹೋಗಿದೆ ಎಂದು ಪೊಲೀಸ್ ಸ್ಟೇಷನ್ ಹೋಗಿ ದೂರು ನೀಡಿರುವುದಿಲ್ಲ.

1965ನೇ ಕರ್ನಾಟಕ ಅಬಕಾರಿ ಕಾಯ್ದೆ ಅಡಿಯಲ್ಲಿ ಪ್ರಕರಣವನ್ನು ದಾಖಲು ಮಾಡುವಾಗ ಆರೋಪಿಯು ಪತ್ತೆಯಾಗದಿದ್ದಲ್ಲಿ, ಅಥವಾ ಪತ್ತೆಯಾಗುವ ಸಾಧ್ಯತೆ ಇಲ್ಲದಿದ್ದಲ್ಲಿ ಪ್ರಕರಣವನ್ನು ಪತ್ತೆಹಚ್ಚಿದ ಒಂದು ತಿಂಗಳಲ್ಲಿ ಯಾವುದೇ ವ್ಯಕ್ತಿಯು ಪ್ರಾಧಿಕಾರದ ಮುಂದೆ ಹಾಜರಾಗಿ ಅಪರಾಧದಲ್ಲಿ ಜಪ್ತಾಗಿರುವ ಸೊತ್ತುಗಳು ತಮ್ಮದೆಂದು, ಅವುಗಳು ಕಾನೂನು ಬದ್ಧವಾಗಿದೆಯೆಂದು ಸಾಕ್ಷ್ಯಾಧಾರಗಳೊಂದಿಗೆ ಸಾಬೀತುಪಡಿಸದೇ ಇದ್ದಲ್ಲಿ, ಸದ್ರಿ ಸೊತ್ತುಗಳು, ಅಬಕಾರಿ ಕಾಯ್ದೆ ಕಲಂ 43ರ ಅಡಿಯಲ್ಲಿ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿರುವ ಸೊತ್ತುಗಳಾಗಿದ್ದಲ್ಲಿ ಅಂತಹ ಸೊತ್ತುಗಳನ್ನು ಕಲಂ 43ಎ ಅಡಿಯಲ್ಲಿ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿರುತ್ತದೆ.

ಪ್ರಾಧಿಕಾರದಲ್ಲಿ ಲಭ್ಯವಿರುವ ದಾಖಲಾತಿಗಳ ಪ್ರಕಾರ ದಿನಾಂಕ: 29.4.2004 ರಂದು ಅಕ್ರಮವಾಗಿ ವಾಹನದ ಸಂ: KA-20H-6500 ಕೈನೆಟಿಕ್ ಹೊಂಡಾ ಇದರಲ್ಲಿ ಮದ್ಯ ಸಾಗಾಟ ಮಾಡುವುದನ್ನು ಪತ್ತೆಹಚ್ಚಿ, ಮದ್ಯ ಮತ್ತು ಮದ್ಯಸಾರ ಸಾಗಾಟಕ್ಕೆ ಬಳಸಿದ ವಾಹನಗಳನ್ನು ಜಪ್ತಿಪಡಿಸಿಕೊಂಡು, ಅಬಕಾರಿ ಉಪ ನಿರೀಕ್ಷಕರು (3) ಗುಪ್ತವಾರ್ತದಳ, ಮಂಗಳೂರು ವಿಭಾಗ, ಮಂಗಳೂರು ಇವರು ಮೊಕದ್ದಮೆ ದಾಖಲಿಸಿರುವುದು ಕಂಡುಬರುತ್ತದೆ.

ಈ ಪ್ರಕರಣದಲ್ಲಿ ಸರ್ಕಾರದ ಅಭಿಯೋಜನಾ ಪರ ಸಲ್ಲಿಸಿರುವ ಸಾಕ್ಷ್ಯಾಧಾರಗಳಿಂದ ಈ ಕೆಳಗಿನ ವಿವಾದಾಂಶಗಳನ್ನು ತೀರ್ಮಾನಿಸುವುದು ಅಗತ್ಯವಾಗಿದ್ದು ಪರಿಶೀಲನಾಂಶಗಳು ಈ ಕೆಳಗಿನಂತಿರುತ್ತದೆ.

1) ದಿನಾಂಕ: 29.4.2004 ರಂದು ವಾಹನ ಸಂ: KA-20H-6500 ಕೈನೆಟಿಕ್ ಹೊಂಡಾದಲ್ಲಿ ಅಕ್ರಮವಾಗಿ ಮದ್ಯವನ್ನು ಸಾಗಣೆ ಮಾಡಲಾಗಿತ್ತೇ?

2) ವಶಪಡಿಸಿಕೊಂಡಿರುವ ವಾಹನ ಮಾಲೀಕ ತಾನೆಂದು ತನಗೆ ತಿಳಿಯದೆ ಅಕ್ರಮ ಮದ್ಯ ಸಾಗಾಣಿಕೆಗೆ ವಾಹನವನ್ನು ಉಪಯೋಗಿಸಲ್ಪಟ್ಟಿತ್ತು ಎಂಬುದನ್ನು ವಾಹನ ಮಾಲೀಕರು ಸಾಬೀತುಪಡಿಸಿದ್ದಾರೆಯೇ?

3) ಜಪ್ತುಪಡಿಸಲಾಗಿರುವ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದೇ?

ಈ ಮೇಲಿನ ಪರಿಶೀಲನಾಂಶಗಳನ್ನು ಲಭ್ಯವಿರುವ ಸಾಕ್ಷ್ಯಾಧಾರಗಳ ಮೇಲೆ ಈ ಕೆಳಗಿನಂತೆ ಉತ್ತರಿಸಿರುತ್ತೇನೆ.

ಒಂದನೇ ಅಂಶವನ್ನು ಗುಣಾತ್ಮಕವಾಗಿ, ಎರಡನೇ ಅಂಶವನ್ನು ನಕಾರಾತ್ಮಕವಾಗಿ ಮತ್ತು ಮೂರನೇ ಅಂಶವನ್ನು ಅಂತಿಮ ಆದೇಶದಂತೆ.

ಪ್ರಾಧಿಕಾರದಲ್ಲಿ ಮುಟ್ಟುಗೋಲು ನಡವಳಿಗಳ ಸಾಕ್ಷಿ ವಿಚಾರಣೆಯನ್ನು ನಡೆಸಲಾಗಿ ಅಭಿಯೋಗದ ಪರ ಸಹಾಯಕ ಅಭಿಯೋಗ ನಿರ್ದೇಶಕರು ಇಬ್ಬರು ಸಾಕ್ಷಿದಾರರನ್ನು ವಿಚಾರಣೆ ಮಾಡಿದ್ದು ದಿ:29.4.2004ರಂದು ವಾಹನ ನೊಂದಣಿ ಸಂ: KA-20H-6500 ಕೈನೆಟಿಕ್ ಹೊಂಡಾದಲ್ಲಿ ಅಕ್ರಮವಾಗಿ ಮದ್ಯ ಸಾಗಾಟವನ್ನು ಪತ್ತೆಹಚ್ಚಿ ದಾಖಲಿಸಲಾದ ಮೊಕದ್ದಮೆಯ ದಾಖಲೆಗಳು ಇದಕ್ಕೆ ಪೂರಕವಾಗಿ ಪ್ರಾಧಿಕಾರದ ಮುಂದೆ ಮೊಕದ್ದಮೆಯನ್ನು ದಾಖಲಿಸಿ ಅಭಿಯೋಗದ ಪರ ಸಾಕ್ಷಿದಾರರು ಸಾಕ್ಷಿಯಲ್ಲಿ ದಿನಾಂಕ: 29.4.2004ರಂದು ವಾಹನ ನೋಂದಣಿ ಸಂಖ್ಯೆ KA-20H-6500 (ಕೈನೆಟಿಕ್ ಹೊಂಡಾ) ಇದರಲ್ಲಿ ಅಕ್ರಮವಾಗಿ ಮದ್ಯವನ್ನು ಸಾಗಾಣಿಕೆ ಮಾಡುವಾಗ ಪತ್ತೆಹಚ್ಚಿ ಮೊಕದ್ದಮೆ ದಾಖಲಿಸಿ, ತನಿಖೆ ಕೈಗೊಂಡು, ಮೊಕದ್ದಮೆಯಲ್ಲಿ ಜಪ್ತಾದ ಮದ್ಯದ ಮಾದರಿಗಳನ್ನು ರಾಸಾಯನಿಕ ವಿಶ್ಲೇಷಕರಲ್ಲಿಗೆ ಕಳುಹಿಸಿದ ಬಗ್ಗೆ ಮತ್ತು ವಿಶ್ಲೇಷಣಾ ವರದಿಯನ್ನು ಪಡೆದಿರುವ ಬಗ್ಗೆ ಪ್ರಾಧಿಕಾರದ ಮುಂದೆ ಪ್ರಾ.ಸಾ1 ಮತ್ತು ಪ್ರಾ.ಸಾ–2 ರವರು ನೀಡಿದ ಸಾಕ್ಷ್ಯ ಹಾಗೂ ಮಂಡಿಸಿದ ದಾಖಲೆಗಳನ್ನು (ನಿಶಾನೆ ಪಿ–1 ರಿಂದ ನಿಶಾನೆ ಪಿ–5) ನಿರೂಪಿಸಿರುವ ಕ್ರಮ ಹಾಗೂ ಮಂಡಿಸಲಾದ ದಾಖಲಾತಿಗಳಿಂದ ವಾಹನದಲ್ಲಿ ಅಕ್ರಮ ಮದ್ಯ ಸಾಗಾಟವಾಗಿರುವುದು ಸ್ಪಷ್ಟವಾಗಿರುತ್ತದೆ. ಸದ್ರಿ ಸಾಕ್ಷಿದಾರರ ಪಾಟೀ ಸವಾಲಿನಲ್ಲಿ ರಕ್ಷಣಾ ವಕೀಲರು ಅಕ್ರಮ ಸಾಗಾಣಿಕೆಯಲ್ಲಿ ವಾಹನ ಬಳಕೆ ಆದ ಕುರಿತು ಸಂಶಯಕ್ಕೆ ಎಡೆಮಾಡುವಂತಹ ಯಾವುದೇ ಅಂಶಗಳನ್ನು ನಿರೂಪಿಸಲು ರಕ್ಷಣಾ ವಕೀಲರು ಪ್ರಯತ್ನಪಟ್ಟಿರುವುದಿಲ್ಲ ಮತ್ತು ಕೈನೆಟಿಕ್ ಹೊಂಡಾ ಸಾಗಾಟ ಮಾಡುತ್ತಿದ್ದ ವಸ್ತು ಮದ್ಯ ಆಗಿರುವುದು ಮಾದರಿಗಳ ರಾಸಾಯನಿಕ ಪರೀಕ್ಷಾ ಫಲಿತಾಂಶದ ವರದಿಯ ಪ್ರಕಾರ ಸಾಭೀತಾಗಿರುತ್ತದೆ. ಈ ಅಂಶಗಳನ್ನು ಅಲ್ಲಗಳೆಯಲು ರಕ್ಷಣಾ ವಕೀಲರು ಯಾವುದೇ ಪ್ರಯತ್ನವನ್ನು ಮಾಡಿರುವುದಿಲ್ಲ. ಹಾಗೂ ಪುರಾವೆಗಳನ್ನು ನೀಡಿರುವುದಿಲ್ಲ. ಪ್ರಾಧಿಕಾರದ ಮುಂದೆ ರಕ್ಷಣಾ ಸಾಕ್ಷಿಯಾದ ವಾಹನದ ಮಾಲೀಕರು ತನ್ನ ನಿರಪರಾಧಿತ್ವವನ್ನು ಸಾಭೀತು ಪಡಿಸುವಲ್ಲಿ ವಿಫಲರಾಗಿದ್ದು, ವಾಹನ ನೊಂದಣಿ ಸಂಖ್ಯೆ: KA-20H-6500 ಕೈನೆಟಿಕ್ ಹೊಂಡಾ ಇದರಲ್ಲಿ ಅಕ್ರಮವಾಗಿ ಮದ್ಯ ಸಾಗಾಣೆ ಆಗಿರುವುದು ಸಾಭೀತಾಗಿರುವುದರಿಂದ ಒಂದನೇ ಅಂಶವನ್ನು ಗುಣಾತ್ಮಕವಾಗಿ ಪರಿಗಣಿಸಲಾಗಿದೆ.

ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43ಬಿ ಅಡಿಯಲ್ಲಿ ವಾಹನದ ಮಾಲೀಕರು ತಮ್ಮ ವಾಹನ ಅಕ್ರಮ ಮದ್ಯ ಸಾಗಾಣಿಕೆಗೆ ಉಪಯೋಗಿಸಿರುವುದಿಲ್ಲ ಎಂಬುದನ್ನು ಮತ್ತು ವಾಹನದ ದುರ್ಬಳಕೆಯ ವಿರುದ್ಧ ಸಾಕಷ್ಟು ಮುನ್ನೆಚ್ಚರಿಕೆ ವಹಿಸಿರುವುದನ್ನು ಪ್ರಾಧಿಕಾರದ ಮುಂದೆ ನಿರೂಪಿಸುವುದು ವಾಹನದ ಮಾಲೀಕರ ಜವಾಬ್ದಾರಿಯಾಗಿರುತ್ತದೆ. ಆದರೆ ವಾಹನದ ಮಾಲೀಕರು ತನ್ನ ಜವಾಬ್ದಾರಿಯನ್ನು ಪ್ರಾಧಿಕಾರದ ಮುಂದೆ ನಿರೂಪಿಸುವಲ್ಲಿ ವಿಫಲರಾಗಿರುತ್ತಾರೆ. ವಾಹನದ ಮಾಲೀಕರಿಗೆ ಕಲಂ 43ಬಿ ಅಡಿಯಲ್ಲಿ ವಾಹನವನ್ನು ಸರ್ಕಾರಕ್ಕೆ ಯಾಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದಕ್ಕೆ ಪ್ರಾಧಿಕಾರದಿಂದ ಕಾರಣ ಕೇಳುವ ನೋಟೀಸನ್ನು ನೀಡಲಾಗಿದ್ದು, ಸದ್ರಿ ಕಾರಣ ಕೇಳುವ ನೋಟೀಸಿಗೆ ಉತ್ತರ ನೀಡಿ ತನ್ನ ವಾಹನವನ್ನು ಮನೆಯ ಶೆಡ್ಡಿನಲ್ಲಿ ಇಟ್ಟು ತಾನು ಮದುವೆಯ ನಿಮಿತ್ತ ಶಿವಮೊಗ್ಗಕ್ಕೆ ಹೋಗಿರುವ ಸಂದರ್ಭದಲ್ಲಿ ಸದ್ರಿ ವಾಹನವನ್ನು ಯಾರೋ ಕಳವು ಮಾಡಿ ಅಕ್ರಮದಲ್ಲಿ ತೊಡಗಿಸಿಕೊಂಡಿದ್ದು ಈ ಅಕ್ರಮಕ್ಕೂ ತನಗೂ ಯಾವುದೇ ಸಂಬಂಧವಿಲ್ಲವೆಂದು ವಿವರಣೆ ನೀಡಿರುತ್ತಾರೆ. ವಾಹನದ ಮಾಲೀಕರು ಖುದ್ದಾಗಿ ರಕ್ಷಣಾ ಸಾಕ್ಷಿಯನ್ನು ನೀಡುವ ಸಂದರ್ಭದಲ್ಲಿಯೂ ತನ್ನ ನಿರಪರಾಧಿತ್ವವನ್ನು ಸಾಭೀತುಪಡಿಸುವಲ್ಲಿ ವಿಫಲರಾಗಿರುತ್ತಾರೆ. ವಾಹನವನ್ನು ಕಳವು ಮಾಡಿ ಈ ಅಕ್ರಮದಲ್ಲಿ ಬಳಸಿಕೊಳ್ಳಲಾಗಿತ್ತೆಂದು ಸಾಕ್ಷ್ಯ ನೀಡಿರುವ ವಾಹನದ ಮಾಲೀಕರು ವಾಹನ ಕಳುವು ಆದ ಬಗ್ಗೆ ಪೊಲೀಸ್ ಠಾಣೆಯಲ್ಲಿ ದೂರು ಸಲ್ಲಿಸಿರುವ ಬಗ್ಗೆ ಯಾವುದೇ ಮಾಹಿತಿ ನೀಡಲು ಹಾಗೂ ಸೂಕ್ತ ಕಾನೂನು ಕ್ರಮ ಕೈಗೊಳ್ಳುವಲ್ಲಿ ವಿಫಲರಾಗಿರುವುದನ್ನು ಗಮನಿಸಿದಾಗ ವಾಹನದ ಮಾಲೀಕರು ತನ್ನ ತಿಳುವಳಿಕೆಯಿಂದಲೇ ಅಕ್ರಮ ಮದ್ಯ ಸಾಗಾಣಿಕೆಗೆ ವಾಹನವನ್ನು ತೊಡಗಿಸಿರುವುದು ನಿಸ್ಸಂದೇಹವಾಗಿ ಸಾಭೀತಾಗಿರುತ್ತದೆ. ಕಾರಣ ಎರಡನೇ ಅಂಶವನ್ನು ನಕರಾತ್ಮಕವಾಗಿ ಪರಿಗಣಿಸಿದೆ.

ಸದ್ರಿ ಮೊಕದ್ದಮೆಗೆ ಒಳಪಟ್ಟು ವಶಪಡಿಸಿಕೊಳ್ಳಲಾಗಿರುವ 90.000 ಲೀಟರು ಅಕ್ರಮ ಮದ್ಯ ಹಾಗೂ ಅಪರಾಧ ಸ್ಥಳದಲ್ಲಿ, ವಶಪಡಿಸಿಕೊಳ್ಳಲಾಗಿರುವ ಇನ್ನೊಂದು ವಾಹನ ಆಟೋರಿಕ್ಷಾ ಸಂ: KA-19AC-3513 ನ್ನು ಈ ಪ್ರಾಧಿಕಾರದ ಮುಟ್ಟುಗೋಲು ಆದೇಶ ದಿ:13.2.2008 ರಂತೆ ಮುಟ್ಟುಗೋಲು ಹಾಕಿಕೊಳ್ಳಲಾಗಿದ್ದು, ವಿಚಾರಣೆಗೆ ಒಳಪಟ್ಟಿರುವ ಈ ವಾಹನವನ್ನು ಸಹಾ ಅದೇ ಅಪರಾಧ ಸ್ಥಳದಿಂದ ಅಕ್ರಮ ಮದ್ಯ ಸಾಗಾಣಿಕೆಗೆ ಸಂಬಂಧಿಸಿ ವಶಪಡಿಸಲಾಗಿದ್ದು, ವಾಹನವನ್ನು ಸದ್ರಿ ಅಪರಾಧಕ್ಕೆ ಉಪಯೋಗಿಸಲಾಗಿರುವುದರಲ್ಲಿ ಯಾವುದೇ ಸಂಶಯಕ್ಕೆ ಆಸ್ಪದವಿರುವುದಿಲ್ಲ. ವಾಹನವನ್ನು ಅಕ್ರಮ ಮದ್ಯ

ಸಾಗಾಣಿಕೆಯಲ್ಲಿ ಬಳಸಲಾಗಿರುವುದರಿಂದ ಹಾಗೂ ಸದ್ರಿ ವಾಹನವನ್ನು ಜಪ್ತುಪಡಿಸಿರುವ ಸಂದರ್ಭದಲ್ಲಿ ವಾಹನದಲ್ಲಿ ಇರಿಸಲಾಗಿದ್ದ ಮದ್ಯದ ಮಾದರಿಗಳ ರಸಾಯನಿಕ ವಿಶ್ಲೇಷಣೆಯಿಂದ ಇದು ಅಕ್ರಮ ಮದ್ಯವೆಂದು ಸಾಭೀತಾಗಿದ್ದು, ವಾಹನದಲ್ಲಿ ಅಕ್ರಮವಾಗಿ ಮದ್ಯ ಸಾಗಾಣಿಕೆ ಮಾಡಲಾಗಿರುವುದರಿಂದ 3ನೇ ಅಂಶ ಹೌದು ಎಂದಾಗುತ್ತದೆ.

ಈ ಮೇಲಿನ ಕಾರಣಗಳಿಂದ ಹಾಗೂ ಲಭ್ಯವಿರುವ ದಾಖಲಾತಿಗಳಿಂದ ಈ ಪ್ರಕರಣದಲ್ಲಿ ಜಪ್ತುಪಡಿಸಲಾಗಿರುವ ವಾಹನ ಕೈನೆಟಿಕ್ ಹೊಂಡಾವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದೇ ಸೂಕ್ತವೆಂದು ಪ್ರಾಧಿಕಾರವು ತೀರ್ಮಾನಿಸಿ ಈ ಪ್ರಕರಣದಲ್ಲಿ ಜಪ್ತುಪಡಿಸಲಾಗಿರುವ ವಾಹನ ಸಂ: KA-20H-6500 ಕೆನೈಟಿಕ್ ಹೊಂಡಾವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಎಸ್‌ಡಿಕೆ:285:ಡಿಟಿಸಿಆರ್:2003–04, ದಿನಾಂಕ: 12ನೇ ಆಗಸ್ಟ್ 2008**

ನೂರ್ ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದ.ಕ.ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಅಧಿನಿಯಮ 1965 ಕಲಂ 43(ಎ)ರಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ನಿಯಮ 43(ಬಿ) ರಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿದ ನಂತರ ಅಬಕಾರಿ ಉಪ ನಿರೀಕ್ಷಕರು, ಗುಪ್ತ ವಾರ್ತಾದಳ, ಮಂಗಳೂರು ವಿಭಾಗ, ಮಂಗಳೂರು ಇವರ ಪ್ರ.ಮಾ.ವ ನಂಬ್ರ :11/2003–04, ದಿನಾಂಕ:29.4.2004 ರಲ್ಲಿ ವಶಪಡಿಸಿಕೊಂಡಿರುವ ಕೈನೆಟಿಕ್ ಹೊಂಡಾ ಸಂ: KA-20H-6500 ನ್ನು ನಿಯಮ 43ಎ(2) ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ. ಮತ್ತು ಈ ಪ್ರಾಧಿಕಾರದ ಆದೇಶ ಸಂಖ್ಯೆ ಎಸ್‌ಡಿಕೆ/285/ಡಿಟಿಸಿಆರ್/ 2003–04, ದಿ:9.8.2004ರಲ್ಲಿ ವಾಹನವನ್ನು ಮಧ್ಯಂತರ ಬಿಡುಗಡೆಗೆ ನೀಡಿದ ಆದೇಶವನ್ನು ಈ ಮೂಲಕ ರದ್ದುಗೊಳಿಸಿ, ಸದ್ರಿ ವಾಹನವನ್ನು ತಕ್ಷಣ ಪ್ರಾಧಿಕಾರದ ವಶಕ್ಕೆ ಒಪ್ಪಿಸಲು ಆದೇಶಿಸಿದೆ. ಆರ್.ಸಿ. ಮಾಲೀಕರು ಸದ್ರಿ ಮುಟ್ಟುಗೋಲು ಹಾಕಿಕೊಳ್ಳಲಾದ ವಾಹನ ಕೆನೈಟಿಕ್ ಹೊಂಡಾ ಸಂ: KA-20H-6500 ನ್ನು ಈ ಆದೇಶ ಹೊರಡಿಸಿದ ದಿನಾಂಕದಿಂದ 30 ದಿವಸಗಳು ದಿ:11.9.2008ರ ಒಳಗೆ ವಾಹನವನ್ನು ಪ್ರಾಧಿಕಾರಕ್ಕೆ ಒಪ್ಪಿಸದಿದ್ದಲ್ಲಿ ವಾಹನದ ಭದ್ರತೆಯಾಗಿ ಈ ಪ್ರಾಧಿಕಾರಕ್ಕೆ ಒಪ್ಪಿಸಿರುವ ಬ್ಯಾಂಕ್ ಗ್ಯಾರೆಂಟಿ ಪತ್ರವನ್ನು ಇನ್‌ವೋಕ್ ಮಾಡಿ ಮೌಲ್ಯವನ್ನು ಸರ್ಕಾರಕ್ಕೆ ಪಡೆಯಲು ಆದೇಶಿಸಿದೆ.

ಈ ಆದೇಶವನ್ನು ಇಂದು ಅಂದರೆ ದಿನಾಂಕ: 12.8.2008 ರಂದು ಶೀಘ್ರಲಿಪಿಗಾರರಿಗೆ ಉತ್ತಲೇಖನ ಕೊಟ್ಟು ಬೆರಳಚ್ಚು ಮಾಡಿಸಿ ಕಂಪ್ಯೂಟರಿನಲ್ಲಿ ಮುದ್ರಿಸಿ ಪ್ರತಿಯನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿವಸಗಳ ನಂತರ ಜ್ಯಾರಿಯಲ್ಲಿ ಬರುತ್ತದೆ.

**ನೂರ್ ಮಹಮ್ಮದ್ ಹುಸೇನ್**

ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅನುಬಂಧ–1**

**ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ:–**

1) ಪ್ರಾ.ಸಾ–1:ಶ್ರೀ.ಯು.ಪ್ರಭಾಕರ ಅಬಕಾರಿ ಉಪ ನಿರೀಕ್ಷಕರು, ಗುಪ್ತವಾರ್ತಾದಳ ಮಂಗಳೂರು ವಿಭಾಗ
2) ಪ್ರಾ.ಸಾ–2:ಶ್ರೀ.ಎಂ.ಆರ್. ರಾಮದಾಸ್, ಅಬಕಾರಿ ಮುಖ್ಯರಕ್ಷಕ, ಗುಪ್ತವಾರ್ತಾದಳ ಮಂಗಳೂರು ವಿಭಾಗ

**ಅನುಬಂಧ–2**

**ಪ್ರತಿ ವಾದಿಗಳ ಪರ ಸಾಕ್ಷಿದಾರರು**

1) ಗಣೇಶ್ ಭಟ್, ಬಿನ್: ವಾಸುದೇವ ಭಟ್, ಆಶ್ರಯ ಎಪಾರ್ಟ್‌ಮೆಂಟ್, ಮಹಾಮಾಹಿ ದೇವಸ್ಥಾನ, ಕಾರ್‌ಸ್ಟ್ರೀಟ್, ಮಂಗಳೂರು.

**ಅನುಬಂಧ–3**

**ಅಭಿಯೋಗದ ಪರ ಮಂಡಿಸಲಾದ ದಾಖಲಾತಿಗಳು**

1) ನಿಶಾನೆ ಪಿ–1 : ಅಧಿಕೃತ ಅಧಿಕಾರಿಗಳಿಗೆ ಸಲ್ಲಿಸಿದ ವರದಿ
2) ನಿಶಾನೆ ಪಿ–2 : ಮಹಜರು ಪ್ರತಿ
3) ನಿಶಾನೆ ಪಿ–3 : ಪ್ರಥಮ ವರ್ತಮಾನ ವರದಿಯ ಪ್ರತಿ
4) ನಿಶಾನೆ ಪಿ–4 : ರಾಸಾಯನಿಕ ತಜ್ಞರ ವರದಿಯ ಪ್ರತಿ
5) ನಿಶಾನೆ ಪಿ–5 : ಮಾದರೀ ಸೀಲು

**ಅನುಬಂಧ–4**

**ಪ್ರತಿ ವಾದಿಗಳ ಪರ ಮಂಡಿಸಲಾದ ದಾಖಲಾತಿಗಳು**

–ಯಾವುದು ಇಲ್ಲ–

**ನೂರ್ ಮಹಮ್ಮದ್ ಹುಸೇನ್**

ಪಿ.ಆರ್. 1054

ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರ ನ್ಯಾಯಾಲಯದಲ್ಲಿ**

**ನಂ: ಎಸ್‌ಡಿಕೆ/66/ಡಿಟಿಸಿಆರ್/2007–08, ದಿನಾಂಕ: 24ನೇ ನವೆಂಬರ್ 2008**

**ಉಪಸ್ಥಿತರು** ನೂರ್ ಮಹಮ್ಮದ್ ಹುಸೇನ್
ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಫಿರ್ಯಾದುದಾರರು:**
ಅಬಕಾರಿ ಉಪ ನಿರೀಕ್ಷಕರು (1) ಜಾರಿ ಮತ್ತು ತನಿಖೆ, ಬೆಳ್ತಂಗಡಿ

**ಆರೋಪಿ:**
ಪರಾರಿಯಾಗಿರುತ್ತಾರೆ.

**ವಾಹನದ ಮಾಲೀಕರು**
ಶ್ರೀ ರಂಜನ್ ಬಿನ್: ಪರಮೇಶ್ವರ್, ಪ್ಲಾಟ್ ನಂ:103–ಬಿ, ಶಿವದರ್ಶನ್ ಅಪಾರ್ಟ್‌ಮೆಂಟ್, ಕದ್ರಿ ದೇವಸ್ಥಾನದ ಬಳಿ, ಮಂಗಳೂರು ತಾಲ್ಲೂಕು.

**ಪ್ರಕರಣದ ಮುಖ್ಯಾಂಶಗಳು:**

ಅಬಕಾರಿ ಉಪ ನಿರೀಕ್ಷಕರು (1), ಜ್ಯಾರಿ ಮತ್ತು ತನಿಖೆ ಬೆಳ್ತಂಗಡಿ ತಾಲ್ಲೂಕು ಇವರು ದಿನಾಂಕ: 20.08.2007ರಂದು ಸಾಯಂಕಾಲ 6:30 ಗಂಟೆಯ ಸಮಯದಲ್ಲಿ ಬೆಳ್ತಂಗಡಿ ತಾಲ್ಲೂಕು ಪಾರೆಂಕಿ ಗ್ರಾಮದ ಪಾರೆಂಕಿ–ಪಾಂಡವರ ಕಲ್ಲು ರಸ್ತೆಯ ಮೂಲಕ ಸಾರಾಯಿ ಸ್ಯಾಚೆಟ್‌ಗಳು ಸಾಗಾಟವಾಗುತ್ತಿದೆ ಎಂದು ದೊರೆತ ಖಚಿತ ಮಾಹಿತಿ ಮೇರೆಗೆ, ಸದ್ರಿ ಸ್ಥಳದಲ್ಲಿ ರಸ್ತೆಗಾವಲು ನಡೆಸುತ್ತಿದ್ದ ಸಂದರ್ಭದಲ್ಲಿ ಪಾರೆಂಕಿ ಕಡೆಯಿಂದ ಬರುತ್ತಿದ್ದ ಬಜಾಜ್ ಚೇತಕ್ ಸ್ಕೂಟರನ್ನು ತಪಾಸಣೆಗೆಂದು ನಿಲ್ಲಿಸಲು ಸೂಚನೆ ನೀಡಿದಾಗ, ಸಮವಸ್ತ್ರದಲ್ಲಿದ್ದ ಸಿಬ್ಬಂದಿಯವರನ್ನು ಕಂಡು ಸ್ಕೂಟರ್‌ನ್ನು ಸುಮಾರು 35 ಮೀಟರ್ ಅಂತರದಲ್ಲಿ ನಿಲ್ಲಿಸಿ, ಸಮೀಪದ ಗೇರುತೋಪಿನ ಒಳಗೆ ಓಡಿ ತಲೆಮರೆಸಿಕೊಂಡಿರುತ್ತಾನೆ. ಇದರಿಂದ ಸಂಶಯಗೊಂಡು ಸ್ಕೂಟರನ್ನು ಪರಿಶೀಲಿಸುವ ಸಲುವಾಗಿ ಮಾನ್ಯ ಘನ ನ್ಯಾಯಾಲಯದಿಂದ ಶೋಧನೆ ಸಮುಚಿತ ಪತ್ರ ಪಡೆಯಲು ಕಾಲಾವಕಾಶವಿಲ್ಲದ ಕಾರಣ ಸ್ಥಳದಲ್ಲಿಯೇ ಸರ್ಚ್‌ಮೆಮೋವನ್ನು ತಯಾರಿಸಿ ಸದ್ರಿ ಸ್ಕೂಟರನ್ನು ಪರಿಶೀಲಿಸಿದಾಗ ಸ್ಕೂಟರಿನ ನೋಂದಣಿ ಸಂಖ್ಯೆ KA-19-H-4795 (ಚಾಸಿಸ್ ನಂಬ್ರ 06f95b93327, ಇಂಜಿನ್ ನಂಬ್ರ 06M95B67489) ಆಗಿದ್ದು, ಸ್ಕೂಟರ್‌ನ ಕಾಲು ಇಡುವ ಜಾಗದಲ್ಲಿ ಬಿಳಿ ಪ್ಲಾಸ್ಟಿಕ್ ಚೀಲದಲ್ಲಿ 100 ಎಂಎಲ್‌ನ 90 ಸಾರಾಯಿ ಸ್ಯಾಚೆಟ್‌ಗಳು– 9.000 ಲೀಟರ್ ಸಾರಾಯಿ ಅಕ್ರಮವಾಗಿ ಸಾಗಾಣಿಕೆ ಮಾಡುತ್ತಿರುವುದನ್ನು ಪತ್ತೆಹಚ್ಚಿ, ಇದು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 11,14,15ರಂತೆ ಅಪರಾಧವಾಗಿದ್ದು, ಕಲಂ 32, 34, 38 (ಎ) ಪ್ರಕಾರ ಶಿಕ್ಷಾರ್ಹವಾಗಿರುವುದರಿಂದ, ಸದ್ರಿ ಸ್ಕೂಟರನ್ನು ಹಾಗೂ ಸಾರಾಯಿಯನ್ನು ಇಲಾಖಾ ವಶಕ್ಕೆ ತೆಗೆದುಕೊಂಡು ಮಹಜರನ್ನು ಸ್ಥಳದಲ್ಲಿಯೇ ತಯಾರಿಸಿ, ಪರಾರಿಯಾದ ಆರೋಪಿಯ ವಿರುದ್ಧ ಪ್ರಥಮ ಮಾಹಿತಿ ವರದಿ ಸಂಖ್ಯೆ 3/2007–08, ದಿನಾಂಕ: 20.08.2007ರಂದು ಮೊಕದ್ದಮೆಯನ್ನು ದಾಖಲಿಸಿಕೊಂಡು ಪ್ರಥಮ ಮಾಹಿತಿ ವರದಿಯನ್ನು ಮಾನ್ಯ ನ್ಯಾಯಾಲಯಕ್ಕೆ ಸಲ್ಲಿಸಿ ನಕಲನ್ನು, ಸೊತ್ತು ಪಟ್ಟಿಯೊಂದಿಗೆ ಪ್ರಾಧಿಕಾರಕ್ಕೆ ಸಲ್ಲಿಸಿ, ವಶಪಡಿಸಿಕೊಂಡ ಸೊತ್ತುಗಳನ್ನು ಹಾಗೂ ವಾಹನವನ್ನು ಮುಂದಿನ ತನಿಖೆ ಮುಗಿಯುವವರೆಗೆ ತಮ್ಮ ವಶದಲ್ಲಿಯೇ ಇಟ್ಟುಕೊಳ್ಳಲು ಅನುಮತಿಯನ್ನು ಕೋರಿರುತ್ತಾರೆ. ಅದರಂತೆ ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ಇಐಬಿ, ದ.ಕ.ಜಿಲ್ಲೆ ಮಂಗಳೂರು ಇವರು ಸದ್ರಿ ಸೊತ್ತುಗಳನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಸೆಕ್ಷನ್ 43ಎ ಪ್ರಕಾರ ತಮ್ಮ ವಶದಲ್ಲಿಯೇ ಇಟ್ಟುಕೊಳ್ಳಲು ಅನುಮತಿಯನ್ನು ನೀಡಿರುತ್ತಾರೆ.

ತನಿಖೆಯನ್ನು ಕೈಗೊಂಡ ಅಬಕಾರಿ ಉಪ ನಿರೀಕ್ಷಕರು(ನಂ.1), ಬೆಳ್ತಂಗಡಿ ವಲಯ ಇವರ ತನಿಖಾ ವರದಿ ಸಂಖ್ಯೆ: ಸಿಆರ್‌ಎಂ/8/2007–08 ದಿ:27.5.2008ರ ವರದಿಯಲ್ಲಿ ವಶಪಡಿಸಿಕೊಂಡ ವಾಹನ ಬಜಾಜ್ ಚೇತಕ್ ಸ್ಕೂಟರ್ ಸಂ: KA-19H-4795ರ ಬಿ ಎಕ್ಸ್‌ಟ್ರ್ಯಾಕ್ಟ್ ವರದಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ. ಬಿ ಎಕ್ಸ್‌ಟ್ರ್ಯಾಕ್ಟ್ ವರದಿಯಲ್ಲಿ ವಾಹನದ ನೋಂದಣಿ ಮಾಲೀಕ ಶ್ರೀ ರಂಜನ್, ಬಿನ್:ಪರಮೇಶ್ವರ್, ಪ್ಲಾಟ್ ನಂ:103–ಬಿ, ಶಿವದರ್ಶನ್ ಅಪಾರ್ಟ್‌ಮೆಂಟ್, ಕದ್ರಿ ದೇವಸ್ಥಾನದ ಬಳಿ, ಮಂಗಳೂರು ತಾಲ್ಲೂಕು ಎಂದು ದೃಢೀಕರಿಸಿದ್ದು, ಸದ್ರಿ ವ್ಯಕ್ತಿಯೇ ಪ್ರಕರಣದ ಮುಖ್ಯ ಆರೋಪಿಯಾಗಿರುತ್ತಾರೆ ಎಂದು ವರದಿಯಲ್ಲಿ ತಿಳಿಸಿರುತ್ತಾರೆ. ಮತ್ತು ಸ್ಯಾಂಪಲ್‌ಗಾಗಿ ತೆಗೆದ ಸಾರಾಯಿ ಸ್ಯಾಚೇಟುಗಳನ್ನು ರಾಸಾಯನಿಕ ವಿಶ್ಲೇಷಣೆಗೆ ಒಳಪಡಿಸಿದ್ದು, ಕರ್ನಾಟಕ ಸರ್ಕಾರ ರಾಸಾಯನಿಕ ವಿಶ್ಲೇಷಕರು ಇವರ ವರದಿ ಸಂ:ಇ–289–10, ದಿ:6.10.07ರ ವರದಿಯಲ್ಲಿ ಸಾರಾಯಿಯ ಮದ್ಯಸಾರ ಪ್ರಮಾಣ 28.0% ಇರುವುದಾಗಿ ದೃಢೀಕರಣ ಪತ್ರ ನೀಡಿರುತ್ತಾರೆ. ಹಾಗೂ ವಶಪಡಿಸಿಕೊಂಡ ಸಾರಾಯಿ ಸ್ಯಾಚೇಟುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ನಾಶಪಡಿಸಲು ದಿ:27.5.2008ರ ತನಿಖಾ ವರದಿಯಲ್ಲಿ ಶಿಫಾರಸ್ಸು ಮಾಡಿರುವ ಮೇರೆಗೆ ಈ ಪ್ರಾಧಿಕಾರದ ಆದೇಶ ಸಮ ಸಂಖ್ಯೆ ದಿನಾಂಕ: 31.7.2008 ರಂದು ತಕ್ಷೀರಿನಲ್ಲಿ ವಶಪಡಿಸಿಕೊಂಡ ವಾಹನದ ಮುಟ್ಟುಗೋಲು ನಡವಳಿ ಪ್ರಕಿಯೆಯನ್ನು ಕಾಯ್ದಿರಿಸಿ, ಸಾರಾಯಿ

ಸ್ಯಾಚೇಟುಗಳನ್ನು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43ಎ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಕಲಂ 43ಎ (3)ರನ್ವಯ ಅಬಕಾರಿ ನಿರೀಕ್ಷಕರು, ಬೆಳ್ತಂಗಡಿ ವಲಯ, ಬೆಳ್ತಂಗಡಿ ಇವರ ಸಮಕ್ಷಮ ನಾಶಪಡಿಸಲಾಗಿರುತ್ತದೆ.

ತಕ್ಷೀರಿನಲ್ಲಿ ವಶಪಡಿಸಿಕೊಂಡ ಬಜಾಜ್ ಚೇತಕ್ ಸ್ಕೂಟರಿನ ಮೌಲ್ಯವನ್ನು ಪಡೆದುಕೊಳ್ಳುವ ಬಗ್ಗೆ ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ದ.ಕ.ಜಿಲ್ಲೆ, ಮಂಗಳೂರು ಇವರು ವಾಹನದ ಈಗಿನ ಮಾರುಕಟ್ಟೆ ಮೌಲ್ಯ ರೂ.3,000/–ಗಳಾಗಬಹುದೆಂದು ಅಂದಾಜಿಸಿ ದಿ:8.7.2008ರಂದು ದೃಢೀಕರಣ ಪತ್ರ ನೀಡಿರುತ್ತಾರೆ.

ವಾಹನ ಮಾಲೀಕರಿಗೆ ಕರ್ನಾಟಕ ಅಬಕಾರಿ ಕಾಯಿದೆ 1965ರ ಸೆಕ್ಷನ್ 43ಬಿ ಪ್ರಕಾರ ಕಾರಣ ಕೇಳಿ ನೋಟಿಸನ್ನು ಈ ಪ್ರಾಧಿಕಾರದಿಂದ ದಿ:27.6.2008ರಂದು ನೋಂದಾಣೆ ಅಂಚೆ ಮೂಲಕ ನೀಡಲಾಗಿರುತ್ತದೆ. ಸದ್ರಿ ನೋಟಿಸು ದಿನಾಂಕ: 18.7.2008 ರಂದು ಸ್ವೀಕೃತಿಯಾಗದೇ ವಾಪಾಸ್ಸು ಈ ಕಚೇರಿಗೆ ಬಂದಿರುತ್ತದೆ. ಆದರೆ ಇದುವರೆಗೂ ವಾಹನ ಮಾಲೀಕರಾಗಲೀ ಅಥವಾ ಅವರ ಪರ ವಕೀಲರಾಗಲೀ ಉತ್ತರವನ್ನು ನೀಡಿರುವುದಿಲ್ಲ.

ನಂತರ ವಿಚಾರಣೆಯನ್ನು ಪ್ರಾರಂಭಿಸಿ ಸರ್ಕಾರದ ಪರ ಸಾಕ್ಷಿಗಳನ್ನು ವಿಚಾರಣೆಗೆ ಒಳಪಡಿಸಿ ಸಾಕ್ಷಿಗಳ ಹೇಳಿಕೆಯನ್ನು ಪಡೆಯಲಾಗಿರುತ್ತದೆ. ಪ್ರತಿರಕ್ಷಾ ಸಾಕ್ಷಿಗಳು ಹಾಜರಾಗದೇ ಇದುದ್ದರಿಂದ ಪ್ರತಿ ರಕ್ಷಾ ಸಾಕ್ಷಿಗಳ ಹೇಳಿಕೆಯನ್ನು ಪಡೆಯಲಾಗಿರುವುದಿಲ್ಲ.

ಈ ಪ್ರಕರಣದಲ್ಲಿ ಸರ್ಕಾರದ ಅಭಿಯೋಜನ ಪರ ಸಲ್ಲಿಸಿರುವ ಸಾಕ್ಷಾಧ್ಯಾರಗಳಿಂದ ಈ ಕೆಳಗಿನ ವಿವಿಧಾಂಶಗಳನ್ನು ತೀರ್ಮಾನಿಸುವುದು ಅಗತ್ಯವಾಗಿದ್ದು ಪರಿಶೀಲನಾಂಶಗಳು ಈ ಕೆಳಗಿನಂತಿರುತ್ತದೆ.

1. ದಿನಾಂಕ:20.08.2007ರಂದು ಬಜಾಜ್ ಚೇತಕ್ ಸ್ಕೂಟರ್ ಸಂ: KA-19H-4795 ರಲ್ಲಿ ಅಕ್ರಮವಾಗಿ ಯಾವುದೇ ರಹದಾರಿ ಪತ್ರವಿಲ್ಲದೆ ಸಾರಾಯಿ ಸಾಗಾಣಿಕೆ ಮಾಡಲಾಗಿದೆಯೇ?
2. ವಶಪಡಿಸಿಕೊಂಡಿರುವ ವಾಹನ ಮಾಲೀಕ ತಾನೆಂದು ತನಗೆ ತಿಳಿಯದೇ ಅಕ್ರಮ ಸಾರಾಯಿ ಸಾಗಾಣಿಕೆಗೆ ವಾಹನವನ್ನು ಉಪಯೋಗಿಸಲ್ಪಟ್ಟಿತ್ತು ಎಂಬುದನ್ನು ವಾಹನ ಮಾಲೀಕರು ಸಾಬೀತುಪಡಿಸಿದಾರೆಯೇ?
3. ಜಪ್ತಿಪಡಿಸಲಾಗಿರುವ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದೇ?

ಒಂದನೇ ಅಂಶವನ್ನು ಗುಣಾತ್ಮಕವಾಗಿ, ಎರಡನೇ ಅಂಶವನ್ನು ನಕರಾತ್ಮಕವಾಗಿ ಮತ್ತು ಮೂರನೇ ಅಂಶವನ್ನು ಅಂತಿಮ ಆದೇಶದಂತೆ.

**ಪ್ರಾ.ಸ–1:**

ಶ್ರೀ ಕೆ.ಟಿ. ಧರ್ಮಪ್ಪ, ಅಬಕಾರಿ ಉಪ ನಿರೀಕ್ಷಕರು(1) ಜಾರಿ ಮತ್ತು ತನಿಖೆ ಬೆಳ್ತಂಗಡಿ ಇವರು ದಿ:5.11.2008ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಇವರು ಪ್ರಕರಣದ ಫಿರ್ಯಾದುದಾರರಾಗಿದ್ದು, ತಮ್ಮ ಸಾಕ್ಷಿಯನ್ನು ನೀಡಿರುತ್ತಾರೆ. ತಾನು ದಿನಾಂಕ: 12.6.2006ರಿಂದ ಬೆಳ್ತಂಗಡಿ ಜಾರಿ ಮತ್ತು ತನಿಖೆ ಕಛೇರಿಯಲ್ಲಿ ಅಬಕಾರಿ ಉಪ ನಿರೀಕ್ಷಕನಾಗಿ ಕರ್ತವ್ಯ ನಿರ್ವಹಿಸುತ್ತಿದ್ದೇನೆ. ದಿ:20.8.2007ರಂದು ನನಗೆ ದೊರೆತ ಖಚಿತ ವರ್ತಮಾನದಂತೆ ನಾನು ನನ್ನ ಸಿಬ್ಬಂದಿಯವರೊಂದಿಗೆ ಇಲಾಖಾ ವಾಹನದಲ್ಲಿ ರಸ್ತೆ ಗಸ್ತನ್ನು ಮಾಡುತ್ತಿದ್ದಾಗ ಪಾರಂಕಿ, ಪಾಂಡವರ ಕಲ್ಲು ರಸ್ತೆಯಲ್ಲಿ ಸಂಜೆ 6–30 ಗಂಟೆಗೆ ಪಾರಂಕಿ ಕಡೆಯಿಂದ ಬಜಾಜ್ ಚೇತಕ್ ಸ್ಕೂಟರ್ ವಾಹನ ಬರುತ್ತಿತ್ತು. ಅದನ್ನು ನಿಲ್ಲಿಸಬೇಕೆನ್ನುವಷ್ಟರಲ್ಲಿ ಆ ವಾಹನದಲ್ಲಿದ್ದ ವ್ಯಕ್ತಿಯು ಸಮವಸ್ತ್ರದಲ್ಲಿದ್ದ ನಮ್ಮನ್ನು ನೋಡಿ ವಾಹನ ಬಿಟ್ಟು ಗೇರು ತೋಪಿನ ಒಳಗಡೆ ಓಡಲು ಪ್ರಾರಂಭಿಸಿದ. ಅವನನ್ನು ನನ್ನ ಸಿಬ್ಬಂದಿಗಳು ಬೆನ್ನಟ್ಟಿದಾಗ ಸಿಗಲಿಲ್ಲ. ಸದ್ರಿ ವ್ಯಕ್ತಿ ಬಿಟ್ಟು ಹೋದ ಸ್ಕೂಟರಿನ ಬಳಿ ಬಂದಾಗ ಒಂದು ಬಿಳಿ ಪ್ಲಾಸ್ಟಿಕ್ ಚೀಲದಲ್ಲಿ 100 ಎಂಎಲ್‌ನ 90 ಸಾರಾಯಿ ಸ್ಯಾಚೇಟುಗಳು ಇರುವುದು ಕಂಡು ಬಂತು. ಅವುಗಳ ಮೇಲೆ ಗೌರಿಬಿದನೂರು ಗೌರಿ ಇಂಡಸ್ಟ್ರೀಸ್, ಕರ್ನಾಟಕ ಸರ್ಕಾರ ಎಂದು ಇತ್ತು. ಸ್ಕೂಟರನ್ನು ಪರಿಶೀಲಿಸಲಾಗಿ ಅದರ ನೊಂದಾಣಿ ಸಂ: ಕೆಎ–19 ಹೆಚ್–4795 ಆಗಿತ್ತು. ಸದ್ರಿ ವ್ಯಕ್ತಿಯು ಸಾರಾಯಿ ಸ್ಯಾಚೇಟುಗಳನ್ನು ಅಕ್ರಮವಾಗಿ ಸಾಗಾಟ ಮಾಡುತ್ತಿದ್ದುದು ಖಚಿತವಾದ ಮೇರೆಗೆ ವಾಹನ ಸಮೇತ ಸಾರಾಯಿ ಸ್ಯಾಚೆಟುಗಳನ್ನು ಸ್ಥಳದಲ್ಲಿಯೇ ಅಮಾನತ್ತುಪಡಿಸಿ ವಶಪಡಿಸಿಕೊಳ್ಳಲಾಯಿತು. ಮತ್ತು 10 ಸಾರಾಯಿ ಸ್ಯಾಚೇಟುಗಳನ್ನು ರಾಸಾಯನಿಕ ಪರೀಕ್ಷೆಗಾಗಿ ಬಟ್ಟೆಯಿಂದ ಸುತ್ತಿ ನೂಲಿನಿಂದ ಕಟ್ಟಿ ಅರಗು ಹಾಕಿ ಇಲಾಖಾ ಮೊಹರು ಹಾಕಿ ಸೀಲು ಮಾಡಲಾಯಿತು. ಮತ್ತು ಸ್ಥಳದಲ್ಲಿಯೇ ಮಾದರಿ ಸೀಲನ್ನು ತಯಾರಿಸಲಾಯಿತು., ತಯಾರಿಸಿದ ಮಹಜರನ್ನು ನೋಡುತ್ತಿದ್ದು ಅದನ್ನು ನಿಶಾನೆ ಪಿ–1 ಎಂದು ಸಾಕ್ಷಿಯ ಸಹಿಯನ್ನು, ಪಿ–1(ಎ) ಎಂದು ಗುರುತಿಸಲಾಯಿತು. ಮಾದರಿ ಸೀಲನ್ನು ನಿಶಾನೆ ಪಿ–2 ಎಂದು ಸಾಕ್ಷಿಯ ಸಹಿಯನ್ನು ನಿಶಾನೆ ಪಿ–2(ಎ) ಎಂದು ಗುರುತಿಸಲಾಯಿತು. ನಂತರ ಅಮಾನತುಪಡಿಸಿಕೊಂಡ ವಸ್ತುಗಳೊಂದಿಗೆ ಕಛೇರಿಗೆ ಬಂದು ಪ್ರಥಮ ಮಾಹಿತಿ ವರದಿಯನ್ನು ತಯಾರಿಸಿ ನಾಯಾಲಯಕ್ಕೆ ಮತ್ತು ಮೇಲಾಧಿಕಾರಿಗಳಿಗೆ ಕಳುಹಿಸಿ ಕೊಟ್ಟಿರುತ್ತೇನೆ ಪ್ರ.ಮಾ.ವರದಿಯನ್ನು ನಿಶಾನೆ ಪಿ–3 ಎಂದು ಸಾಕ್ಷಿಯ ಸಹಿಯನ್ನು ನಿಶಾನೆ ಪಿ–3(ಎ) ಎಂದು ಗುರುತಿಸಲಾಯಿತು. ವಾಹನದ ಮಾಲೀಕತ್ವದ ಬಗ್ಗೆ ಮಂಗಳೂರಿನ ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಂದ ಬಿ ರಿಜಿಸ್ಟಾರ್ ವರದಿಯನ್ನು ಪಡೆದುಕೊಂಡಿರುತ್ತೇನೆ. ಅದನ್ನು ನೋಡುತ್ತಿದ್ದು ನಿಶಾನೆ ಪಿ–4 ಎಂದು ಗುರುತಿಸಲಾಯಿತು. ವಾಹನ ಮಾಲೀಕರಾದ ಎಂ.ಆರ್. ರಂಜನ್ ಎನ್ನುವವರಿಗೆ ಕಾರಣ ಕೇಳಿ ನೋಟೀಸನ್ನು ಕೊಟ್ಟಿರುತ್ತೇನೆ.

ಸದ್ರಿಯವರು ಯಾವುದೇ ಉತ್ತರವನ್ನು ಸಲ್ಲಿಸಿರುವುದಿಲ್ಲ. ಸದ್ರಿಯವರು ನಿಶಾನೆ ಪಿ–4ರಲ್ಲಿ ಕಾಣಿಸಿದ ವಿಳಾಸದಲ್ಲಿರಲಿಲ್ಲ. ಅಮಾನತುಪಡಿಸಿಕೊಂಡ ಮಾದರಿ ಸಾರಾಯಿ ತೊಟ್ಟಿಗಳನ್ನು ರಾಸಾಯನಿಕ ವಿಶ್ಲೇಷಕರಲ್ಲಿ ಕಳುಹಿಸಿ, ಅವರಿಂದ ವರದಿಯನ್ನು ಪಡೆದುಕೊಂಡಿರುತ್ತೇನೆ. ಸದ್ರಿ ವರದಿಯನ್ನು ನಿಶಾನೆ ಪಿ–5 ಎಂದು, ಸಾಕ್ಷಿಯ ಸಹಿಯನ್ನು ನಿಶಾನೆ ಪಿ–5(ಎ) ಎಂದು ಗುರುತಿಸಲಾಯಿತು. ಪರೀಕ್ಷಿಸಿದ ಸಾರಾಯಿ ಸ್ಯಾಚೇಟ್‌ಗಳಲ್ಲಿ ಶೇ.28 ರಷ್ಟು ಮದ್ಯಸಾರ ಇರುವುದಾಗಿ ನಿಶಾನೆ ಪಿ–5ರಲ್ಲಿ ಕಾಣಿಸಲಾಗಿದೆ. ಈ ಪ್ರಕರಣದಲ್ಲಿ ಬಜಾಜ್ ಚೇತಕ್ ದ್ವಿಚಕ್ರ ವಾಹನವನ್ನು ಅಕ್ರಮ ಸಾರಾಯಿ ಸ್ಯಾಚೇಟುಗಳನ್ನು ಸಾಗಾಣಿಕೆಗೆ ಬಳಸಿರುವುದು ಖಚಿತವಾದ ಮೇರೆಗೆ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ಪ್ರಕ್ರಿಯೆಗೆ ಒಳಪಡಿಸಲು ಮಾನ್ಯ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದ.ಕ. ಜಿಲ್ಲೆ ಮಂಗಳೂರು ಇವರಿಗೆ ದಿ:27.5.2008 ರಂದು ವರದಿಯನ್ನು ಸಲ್ಲಿಸಿರುತ್ತೇನೆ. ಸದ್ರಿ ವರದಿಯನ್ನು ನೋಡಲಾಗಿ ಅದನ್ನು ನಿಶಾನೆ ಪಿ–6 ಎಂದು, ಸಾಕ್ಷಿಯ ಸಹಿಯನ್ನು ನಿಶಾನೆ ಪಿ–6(ಎ) ಎಂದು ಗುರುತಿಸಲಾಯಿತು ಎಂದು ಸಾಕ್ಷಿ ನೀಡಿರುತ್ತಾರೆ.

ವಾಹನದ ಮಾಲೀಕರಾದ ಶ್ರೀ ರಂಜನ್ ರವರಿಗೆ ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43 ರಡಿ ವಾಹನದ ಮುಟ್ಟುಗೋಲು ಸಂಬಂಧ ನೀಡಿದ ನೋಟೀಸು ವಾಪಸ್ಸು ಬಂದಿದ್ದು, ಸದ್ರಿಯವರು ನೋಟಿಸನ್ನು ಪಡೆದಿರುವುದಿಲ್ಲ. ಆದ ಕಾರಣ ಪಾರ್ಟಿ ಸವಾಲು ಇಲ್ಲವೆಂದು ಪರಿಗಣಿಸಲಾಗಿದೆ.

1965ನೇ ಕರ್ನಾಟಕ ಅಬಕಾರಿ ಕಾಯ್ದೆ ಅಡಿಯಲ್ಲಿ ಪ್ರಕರಣವನ್ನು ದಾಖಲು ಮಾಡುವಾಗ ಆರೋಪಿಯು ಪತ್ತೆಯಾಗದಿದ್ದಲ್ಲಿ, ಅಥವಾ ಪತ್ತೆಯಾಗುವ ಸಾಧ್ಯತೆ ಇಲ್ಲದಿದ್ದಲ್ಲಿ ಪ್ರಕರಣವನ್ನು ಪತ್ತೆಹಚ್ಚಿದ ಒಂದು ತಿಂಗಳಲ್ಲಿ ಯಾವುದೇ ವ್ಯಕ್ತಿಯು ಪ್ರಾಧಿಕಾರದ ಮುಂದೆ ಹಾಜರಾಗಿ ಅಪರಾಧದಲ್ಲಿ ಜಫ್ತಾಗಿರುವ ಸೊತ್ತುಗಳು ತಮ್ಮದೆಂದು, ಅವುಗಳು ಕಾನೂನು ಬದ್ಧವಾಗಿದೆಯೆಂದು ಸಾಕ್ಷ್ಯಾಧಾರಗಳೊಂದಿಗೆ ಸಾಭೀತುಪಡಿಸದೇ ಇದ್ದಲ್ಲಿ, ಸದ್ರಿ ಸೊತ್ತುಗಳು, ಅಬಕಾರಿ ಕಾಯ್ದೆ ಕಲಂ 43ರ ಅಡಿಯಲ್ಲಿ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿರುವ ಸೊತ್ತುಗಳಾಗಿದ್ದಲ್ಲಿ ಅಂತಹ ಸೊತ್ತುಗಳನ್ನು ಕಲಂ 43ಎ ಅಡಿಯಲ್ಲಿ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿರುತ್ತದೆ.

ಈ ಪ್ರಕರಣದ ಫಿರ್ಯಾದುದಾರರು ಪೂರಕವಾಗಿ ನೀಡಿರುವ ಸಾಕ್ಷಾಧಾರದ ಮೇಲೆ ಹಾಗೂ ಲಭ್ಯವಿರುವ ದಾಖಲಾತಿಗಳಿಂದ ದಿ:20.08.2007ರಂದು ಜಪ್ತುಪಡಿಸಿರುವ ಬಜಾಜ್ ಚೇತಕ್ ಸ್ಕೂಟರ್ ಸಂ: KA-19H-4795 ರಲ್ಲಿ ಅಕ್ರಮವಾಗಿ ಸಾರಾಯಿ ಸಾಗಾಣಿಕೆಯಾಗಿರುವುದು ಸಾಭೀತಾಗಿರುವುದರಿಂದ ಒಂದನೇ ಅಂಶವನ್ನು ಗುಣಾತ್ಮಕವಾಗಿ ಪರಿಗಣಿಸಲಾಗಿದೆ.

ಇಂತಹ ಅಕ್ರಮ ಸಾರಾಯಿಯು ತನ್ನ ತಿಳುವಳಿಕೆಗೆ ಬಾರದೇ ನಡೆದಿದೆ ಎಂಬುದನ್ನು ಸಾಕ್ಷದಾರಗಳೊಂದಿಗೆ ಸಾಭೀತುಪಡಿಸುವುದು ವಾಹನ ಮಾಲೀಕರ ಆದ್ಯ ಹೊಣೆಗಾರಿಕೆಯಾಗಿರುತ್ತದೆ. ಆದರೆ ಈ ಪ್ರಕರಣದ ವಾಹನದ ಮಾಲೀಕರಿಗೆ ಕಾರಣ ಕೇಳಿ ನೋಟೀಸು ನೋಂದಾಯಿತ ಅಂಚೆ ಮೂಲಕ ನೀಡಲಾಗಿದ್ದರೂ, ಸದ್ರಿ ನೋಟೀಸು ವಾಹನದ ಮಾಲೀಕರಿಗೆ ಜ್ಯಾರಿಯಾಗದೇ ಅಂಚೆ ಷರಾದೊಂದಿಗೆ ವಾಪಸ್ಸು ಪ್ರಾಧಿಕಾರಕ್ಕೆ ಬಂದಿರುತ್ತದೆ. ಪ್ರಕರಣ ದಾಖಲಾಗಿ ಈಗಾಗಲೇ ಒಂದು ವರ್ಷ ಎರಡು ತಿಂಗಳು ಕಳೆದಿದ್ದರೂ ವಾಹನದ ಮಾಲೀಕರು ತನ್ನ ವಾಹನವನ್ನು ಪಡೆದುಕೊಳ್ಳುವ ಬಗ್ಗೆ ಕಾನೂನು ರೀತ್ಯಾ ಯಾವುದೇ ಕ್ರಮ ಕೈಗೊಳ್ಳದೇ ಇರುವುದು ಹಾಗೂ ವಾಹನದ ಮಾಲೀಕರು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸಾಕ್ಷ್ಯಾಧಾರಗಳೊಂದಿಗೆ ವಾಹನವನ್ನು ತನ್ನ ತಿಳುವಳಿಕೆಗೆ ಬಾರದೇ ಅಕ್ರಮ ಸಾರಾಯಿ ಸಾಗಾಣಿಕೆ ಉಪಯೋಗಿಸಲಾಗಿದೆ ಎಂದು ರುಜುವಾತು ಪಡಿಸಲು ವಿಫಲರಾಗಿರುವುದನ್ನು ಪರಿಗಣಿಸಿದಾಗ, ವಾಹನದ ಮಾಲೀಕರು ತನ್ನ ವಾಹನದಲ್ಲಿ ಅಕ್ರಮವಾಗಿ ಸಾರಾಯಿ ಸಾಗಾಣಿಕೆ ಮಾಡಿರುವುದು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ. ಹಾಗೂ ಈ ಪ್ರಾಧಿಕಾರದ ಮುಂದೆ ಹಾಜರಾಗದೇ ಇರುವುದನ್ನು ಗಮನಿಸಿದಾಗ ವಾಹನ ಮಾಲೀಕರು ತನ್ನ ತಿಳುವಳಿಕೆಯಿಂದಲೇ ವಾಹನವನ್ನು ಅಕ್ರಮ ಸಾರಾಯಿ ಸಾಗಾಣಿಕೆಗೆ ಬಳಸಿರುವುದು ನಿಸ್ಸಂದೇಹವಾಗಿ ಸಾಭೀತಾಗಿರುತ್ತದೆ. ಈ ಮೇಲಿನ ಕಾರಣಗಳಿಂದ ಎರಡನೇ ಅಂಶವನ್ನು ನಕಾರಾತ್ಮಕವಾಗಿ ಪರಿಗಣಿಸಿದೆ.

ಈ ಮೇಲಿನ ಎಲ್ಲಾ ಕಾರಣಗಳಿಂದ ಹಾಗೂ ಲಭ್ಯವಿರುವ ದಾಖಲಾತಿಗಳಿಂದ ಈ ಪ್ರಕರಣದಲ್ಲಿ ಜಪ್ತಿಪಡಿಸಲಾಗಿರುವ ಬಜಾಜ್ ಚೇತಕ್ ಸ್ಕೂಟರನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದೇ ಸೂಕ್ತವೆಂದು ಪ್ರಾಧಿಕಾರವು ತೀರ್ಮಾನಿಸಿ ಈ ಪ್ರಕರಣದಲ್ಲಿ ಜಪ್ತುಪಡಿಸಲಾಗಿರುವ ಬಜಾಜ್ ಚೇತಕ್ ಸ್ಕೂಟರ್ ಸಂ: KA-19H-4795 ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

ನೂರ್ ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಕಾಯಿದೆ 1965ನೇ ಕಾಲಂ 43 (ಎ) ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ನಿಯಮ 43(ಬಿ) ರಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ, ಅಬಕಾರಿ ಉಪ ನಿರೀಕ್ಷಕರು (1) ಜಾರಿ ಮತ್ತು ತನಿಖೆ, ಬೆಳ್ತಂಗಡಿ ಇವರ ತಕ್ಷೀರು ಸಂಖ್ಯೆ: 3/2007–08 ದಿ: 20–8–2007 ರಲ್ಲಿ ಜಪ್ತಿಪಡಿಸಿಕೊಂಡಿರುವ

ಬಜಾಜ್ ಚೇತಕ್ ಸ್ಕೂಟರ್ ಸಂ: KA-19H-4795 (ಚಾಸೀಸ್ ನಂ: 06F95B93327 ಇಂಜಿನ್ ನಂ: 06M95B67489)ನ್ನು ನಿಯಮ 43ಎ(2) ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ದಿನಾಂಕ:24.11.2008 ರಂದು ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿವಸಗಳ ನಂತರ ಜಾರಿಯಲ್ಲಿ ಬರುತ್ತದೆ.

**ನೂರ್ ಮಹಮ್ಮದ್ ಹುಸೇನ್**
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅನುಬಂಧ–I**

**ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ:–**

ಪ್ರಾ.ಸಾ– I: ಶ್ರೀ ಧರ್ಮಪ್ಪ ಕೆ.ಟಿ, ಅಬಕಾರಿ ಉಪ ನಿರೀಕ್ಷಕರು (1) ಬೆಳ್ತಂಗಡಿ ವಲಯ

**ಅನುಬಂಧ–II**

**ಫಿರ್ಯಾದುದಾರರ ಪರ ಮಂಡಿಸಲಾದ ದಾಖಲೆಗಳು–**

| | | |
|---|---|---|
| ನಿಶಾನೆ ಪಿ–I | : | ಮಹಜರು ಪ್ರತಿ |
| ನಿಶಾನೆ ಪಿ–1 ಎ | : | ಫಿರ್ಯಾದುದಾರರು ಹಾಕಿದ ಮಹಜರಿನ ಸಹಿ. |
| ನಿಶಾನೆ ಪಿ–2 | : | ಮಾದರಿ ಸೀಲು |
| ನಿಶಾನೆ ಪಿ2–ಎ | : | ಮಾದರಿ ಸೀಲಿನಲ್ಲಿ ಸಾಕ್ಷಿಯ ಸಹಿ |
| ನಿಶಾನೆ ಪಿ–3 | : | ಪ್ರಥಮ ಮಾಹಿತಿ ವರದಿ. |
| ನಿಶಾನೆ ಪಿ–3 ಎ | : | ಸಾಕ್ಷಿಯ ಸಹಿ |
| ನಿಶಾನೆ ಪಿ–4 | : | ವಾಹನದ ಬಿ ಎಕ್ಸ್‌ಟ್ರಾಕ್ಟ್ ವರದಿ |
| ನಿಶಾನೆ ಪಿ–5 | : | ರಾಸಾಯನಿಕ ಕೆಮಿಕಲ್ ವರದಿ |
| ನಿಶಾನೆ ಪಿ–5 ಎ | : | ಸಾಕ್ಷಿಯ ಸಹಿ |
| ನಿಶಾನೆ ಪಿ–6 | : | ತನಿಖಾ ವರದಿ |
| ನಿಶಾನೆ ಪಿ–6 ಎ | : | ಸಾಕ್ಷಿಯ ಸಹಿ |

**ಅನುಬಂಧ–III**

**ವಾಹನ ಮಾಲೀಕರ ಪರವಾಗಿ ವಿಚಾರಣೆ ಮಾಡಲಾದ ಸಾಕ್ಷಿದಾರರು:–**

**ಅರ್ಜಿದಾರರ ಹೇಳಿಕೆ:–** ಯಾವುದು ಇಲ್ಲ–

**ಅನುಬಂಧ–IV**

**ವಾಹನ ಮಾಲೀಕರ ಪರವಾಗಿ ಗುರುತಿಸಲಾದ ದಾಖಲೆಗಳು:–** ಯಾವುದು ಇಲ್ಲ–

**ನೂರ್ ಮಹಮ್ಮದ್ ಹುಸೇನ್**
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

ಪಿ.ಆರ್. 1348

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಉಪವಿಭಾಗ–1, ಮಂಡ್ಯ, ಇವರ ನ್ಯಾಯಾಲಯದಲ್ಲಿ**

**ಪ್ರಕರಣ ಸಂಖ್ಯೆ:ಕಾಅಮಂ–1/ಕಾನಪಕಾ/ಮರಣ/ವಿವ–05/2009**

**ಅರ್ಜಿದಾರರು**

ಶ್ರೀ ಶಂಕರ್ ಸಹು ಬಿನ್ ಬರೂನ್, ಅಮರಪಳ್ಳಿ ಗ್ರಾಮ, ಬಹಲಪದರ್ (ಗ್ರಾಮ ಪಂಚಾಯಿತಿ), ಬಿರುಮಹರಾಜ್ ಪುರ್ ತಾ: ಸೋನಾಪುರ ಜಿಲ್ಲೆ, ಓರಿಸ್ಸಾ ರಾಜ್ಯ, ಹಾಲಿ ವಾಸ: ಕೇರಾಫ್: ಹೆಚ್.ಸಿ. ಸುರೇಶ್, ಹುಸ್ಕೂರ್ ಗ್ರಾಮ, ಕಸಬಾ ಹೋಬಳಿ, ಮಳವಳ್ಳಿ ತಾ: ಮಂಡ್ಯ ಜಿಲ್ಲೆ.

**ಪ್ರತಿವಾದಿಗಳು**

1. ಶ್ರೀ ಜಿ.ಬಿ. ರಾಜು ಬಿನ್ ಬೋರಯ್ಯ, ಹೌಸ್ ನಂ:303, ಗೆಜ್ಜಲಗೆರೆ, ಮದ್ದೂರು ತಾಲ್ಲೂಕು, ಮಂಡ್ಯ ಜಿಲ್ಲೆ.
2. ಬ್ರಾಂಚ್ ಮ್ಯಾನೇಜರ್, ಯುನೈಟೆಡ್ ಇಂಡಿಯ ಇನ್ಸೂರೆನ್ಸ್ ಕಂ.ಲಿ., ನಂ.442/3/4, 2ನೇ ಮಹಡಿ, ಚಾಮರಾಜ ಜೋಡಿ ರಸ್ತೆ, ರಾಮಸ್ವಾಮಿ ವೃತ್ತದ ಹತ್ತಿರ, ಮೈಸೂರು.

**ಪ್ರಕಟಣೆ**

ಅರ್ಜಿದಾರರಾದ ಶ್ರೀಮತಿ ಶಂಕರ್ ಸಹು ಇವರು ತಾವು ಶ್ರೀ ಪಂಕಜ್ ಇವರ ತಂದೆ ಎಂದು ಅವರ ಮರಣದಿಂದ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಶ್ರೀ ಪಂಕಜ್ ರವರು ಒಂದನೇ ಪ್ರತಿವಾದಿಗಳಾದ ಶ್ರೀ ಜಿ.ಬಿ. ರಾಜು ಇವರ ವಾಹನ ಸಂಖ್ಯೆ ಕೆ.ಎ.09/9713 ರಲ್ಲಿ ಲೋಡರ್ ಅಂಡ್ ಅನ್ ಲೋಡರ್ ಆಗಿ ಕೆಲಸ

ನಿರ್ವಹಿಸುತ್ತಿದ್ದಾಗ ದಿನಾಂಕ:09.03.2009 ರಂದು ಸಂಭವಿಸಿದ ಅಪಘಾತದಲ್ಲಿ ಮರಣಹೊಂದಿದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಕಾನೂನು ಬದ್ಧ ಆಶ್ರಿತರೆಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಆಕ್ಷೇಪಣೆಗಳನ್ನಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಎ.ಸಿ. ತಮ್ಮಣ್ಣ**
ಕಾರ್ಮಿಕ ಅಧಿಕಾರಿ ಹಾಗೂ ಆಯುಕ್ತರು,
ಕಾರ್ಮಿಕ ನಷ್ಟ ಪರಿಹಾರ ಕಾಯ್ದೆ ಅಡಿ, ಉಪವಿಭಾಗ–1, ಮಂಡ್ಯ.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಉಪವಿಭಾಗ–1, ಮಂಡ್ಯ, ಇವರ ನ್ಯಾಯಾಲಯದಲ್ಲಿ**
**ಪ್ರಕರಣ ಸಂಖ್ಯೆ:ಕಾಅಮಂ–1/ಕಾನಪಕಾ/ಮರಣ/ವಿವ–06/2009**

**ಅರ್ಜಿದಾರರು**

1. ಜಗದಾನಂದ ಸಹು ಬಿನ್ ಬಿರ್ ಸಹು
2. ಕೈಂಟಾ ಸಹು ಕೋಂ: ಜದಾನಂದ ಸಹು, ಅಮರಪಳ್ಳಿ ಗ್ರಾಮ, ಬಹಲಪದರ್ (ಗ್ರಾಮ ಪಂಚಾಯಿತಿ), ಬಿರುಮಹರಾಜ್ ಪುರ್ ತಾ: ಸೋನಾಪುರ ಜಿಲ್ಲೆ, ಓರಿಸ್ಸಾ ರಾಜ್ಯ,
   ಹಾಲಿ ವಾಸ: ಕೇರಾಫ್: ಹೆಚ್.ಸಿ. ಸುರೇಶ್, ಹುಸ್ಕೂರ್ ಗ್ರಾಮ, ಕಸಬಾ ಹೋಬಳಿ ಮಳವಳ್ಳಿ ತಾ: ಮಂಡ್ಯ ಜಿಲ್ಲೆ.

**ಪ್ರತಿವಾದಿಗಳು**

1. ಶ್ರೀ ಜಿ.ಬಿ. ರಾಜು ಬಿನ್ ಬೋರಯ್ಯ, ಹೌಸ್ ನಂ:303, ಗೆಜ್ಜಲಗೆರೆ, ಮದ್ದೂರು ತಾಲ್ಲೂಕು, ಮಂಡ್ಯ ಜಿಲ್ಲೆ.
2. ಬ್ರಾಂಚ್ ಮ್ಯಾನೇಜರ್, ಯುನೈಟೆಡ್ ಇಂಡಿಯ ಇನ್ಶೂರೆನ್ಸ್ ಕಂ.ಲಿ., ನಂ.442/3/4, 2ನೇ ಮಹಡಿ, ಚಾಮರಾಜ ಜೋಡಿ ರಸ್ತೆ, ರಾಮಸ್ವಾಮಿ ವೃತ್ತದ ಹತ್ತಿರ, ಮೈಸೂರು.

**ಪ್ರಕಟಣೆ**

ಅರ್ಜಿದಾರರಾದ ಶ್ರೀಮತಿ ಜಗದಾನಂದ ಸಹು ಇವರು ತಾವು ಶ್ರೀ ಸುಗದೀಪ್ ಇವರ ತಂದೆ ಎಂದು ಅವರ ಮರಣದಿಂದ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಶ್ರೀ ಸುಗದೀಪ್ ರವರು ಒಂದನೇ ಪ್ರತಿವಾದಿಗಳಾದ ಶ್ರೀ ಜಿ.ಬಿ. ರಾಜು ಇವರ ವಾಹನ ಸಂಖ್ಯೆ ಕೆ.ಎ.09/9713 ರಲ್ಲಿ ಲೋಡರ್ ಅಂಡ್ ಅನ್ ಲೋಡರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ದಿನಾಂಕ:09.03.2009 ರಂದು ಸಂಭವಿಸಿದ ಅಪಘಾತದಲ್ಲಿ ಮರಣಹೊಂದಿದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಕಾನೂನು ಬದ್ಧ ಆಶ್ರಿತರೆಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಆಕ್ಷೇಪಣೆಗಳನ್ನಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಎ.ಸಿ. ತಮ್ಮಣ್ಣ**
ಪಿ.ಆರ್. 380
ಕಾರ್ಮಿಕ ಅಧಿಕಾರಿ ಹಾಗೂ ಆಯುಕ್ತರು,
ಕಾರ್ಮಿಕ ನಷ್ಟ ಪರಿಹಾರ ಕಾಯ್ದೆ ಅಡಿ, ಉಪವಿಭಾಗ–1, ಮಂಡ್ಯ.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪವಿಭಾಗ–1, ಚಿಕ್ಕಮಗಳೂರು**
**ಸಂಖ್ಯೆ:ಕಾಪಕಾ/ಎಫ್–13:2008, ದಿನಾಂಕ: 23ನೇ ಮಾರ್ಚ್ 2009**

**ಅರ್ಜಿದಾರರು:**

1. ಶ್ರೀಮತಿ ಕುಸುಮ ಕೋಂ:ಲೇ ಜವರಯ್ಯ,
   ಮುತ್ತಿನಮ್ಮ ಟೆಂಪಲ್ ರಸ್ತೆ, ಹಿರೇಮಗಳೂರು, ಜ್ಯೋತಿನಗರ ಅಂಚೆ, ಚಿಕ್ಕಮಗಳೂರು.
2. ಹೆಚ್.ಜಿ. ಪ್ರದೀಪ್ ಬಿನ್ ಲೇ: ಜವರಯ್ಯ, ಮುತ್ತಿನಮ್ಮ ಟೆಂಪಲ್ ರಸ್ತೆ, ಹಿರೇಮಗಳೂರು.
   ಜ್ಯೋತಿನಗರ ಅಂಚೆ, ಚಿಕ್ಕಮಗಳೂರು.

**ಪ್ರತಿವಾದಿಗಳು:**

1. ಶ್ರೀ ಹೆಚ್.ಎಂ. ಮಲ್ಲೇಶಪ್ಪ ಬಿನ್:ಲೇ ಮಲ್ಲೇಗೌಡ
   ಅಗ್ರಿಕಲ್ಚರಿಸ್ಟ್ ಅಂಡ್ ಸಿಮೆಂಟ್ ವೆಂಡರ್, ಹಳೇಬೀಡು, ಟೌನ್ ಅಂಡ್ ಅಂಚೆ, ಬೇಲೂರು ತಾಲ್ಲೂಕು, ಹಾಸನ ಜಿಲ್ಲೆ.

ಶ್ರೀ ಜವರಯ್ಯ ಎಂಬುವರು ಪ್ರತಿವಾದಿಯಲ್ಲಿ ಕೆಲಸದ ಮೇಲಿದ್ದಾಗ ದಿ: 26.08.2007 ರಂದು ಅಪಘಾತ ಉಂಟಾಗಿ ಮೃತಪಟ್ಟಿರುವ ಬಗ್ಗೆ ಪರಿಹಾರ ಕೋರಿ ಮೇಲ್ಕಂಡ ಅರ್ಜಿದಾರರು ಅರ್ಜಿಯನ್ನು ಈ ನ್ಯಾಯಾಲಯದಲ್ಲಿ ಸಲ್ಲಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿ ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೆ ಇದ್ದಲ್ಲಿ ಅರ್ಜಿದಾರರನ್ನು ಹೊರತುಪಡಿಸಿ ಮೃತನ ಅವಲಂಬಿತರು ಯಾರೂ ಇಲ್ಲ ಎಂದು ಪರಿಗಣಿಸಿ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಕೈಗೊಳ್ಳಲಾಗುವುದು.

**ಕೆ.ಜಿ. ಜಾನ್ಸನ್**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಉಪವಿಭಾಗ–1, ಚಿಕ್ಕಮಗಳೂರು.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪವಿಭಾಗ–1, ಚಿಕ್ಕಮಗಳೂರು**
**ಸಂಖ್ಯೆ:ಕಾಪಕಾ/ಎಫ್–18:2007, ದಿನಾಂಕ: 23ನೇ ಮಾರ್ಚ್ 2009**

**ಅರ್ಜಿದಾರರು:**

1. ಶ್ರೀಮತಿ ಜಾನಕಿ ಕೋಂ: ಚಂದ್ರಶೇಖರ ನಾಯ್ಡು,
2. ಕು:ನವೀನಾ ಬಿನ್: ಚಂದ್ರಶೇಖರ್ ನಾಯ್ಡು,
   ವಾಸ: ಕೆಳಗೂರು ಗ್ರಾಮ, ಕಬ್ಬಿಣ ಸೇತುವೆ ಅಂಚೆ,
   ಚಿಕ್ಕಮಗಳೂರು ತಾಲ್ಲೂಕು ಮತ್ತು ಜಿಲ್ಲೆ.
3. ಶ್ರೀ ಚಂದ್ರಶೇಖರ್ ನಾಯ್ಡು, ಬಿನ್: ವೀರಸ್ವಾಮಿ ನಾಯ್ಡು,
   ವಾಸ: ಮಲ್ಲೇನಹಳ್ಳಿ ಗ್ರಾಮ, ಮತ್ತು ಅಂಚೆ, ಚಿಕ್ಕಮಗಳೂರು ತಾಲ್ಲೂಕು.

**ಪ್ರತಿವಾದಿಗಳು:**

1. ಶ್ರೀ ಮೊಹಮ್ಮದ್ ಇಬ್ರಾಹಿಂ ಬಿನ್ ದಿ:ಪಕ್ಕಿಬ್ಯಾರಿ, ವಿಜಯಪುರ ಬಡಾವಣೆ,
   ವಾಸ: ವಿಜಯಪುರ ಮುಖ್ಯರಸ್ತೆ, ಚಿಕ್ಕಮಗಳೂರು.
2. ಶ್ರೀ ಅಣ್ಣಪ್ಪ ಬಿನ್:ರಂಗಪ್ಪ, ಲಾರಿ ನಂ–ಕೆಎ–19:3615 ಮಾಲೀಕರು
   ವಾಸ:ಅರವಿಂದ ನಗರ, ಬಸವನಹಳ್ಳಿ, ಚಿಕ್ಕಮಗಳೂರು.
3. ದಿ ಬ್ರಾಂಚ್ ಮ್ಯಾನೇಜರ್ ಮೆ:ಯುನೈಟೆಡ್ ಇಂಡಿಯಾ, ಇನ್ಸೂರೆನ್ಸ್ ಕಂ.ಲಿ., ಚಿಕ್ಕಮಗಳೂರು.

ಶ್ರೀ ಹರೀಶ್ ಎಂಬುವರು ಪ್ರತಿವಾದಿಯಲ್ಲಿ ಕೆಲಸದ ಮೇಲಿದ್ದಾಗ ದಿ: 03.04.2004 ರಂದು ಅಪಘಾತ ಉಂಟಾಗಿ ಮೃತಪಟ್ಟಿರುವ ಬಗ್ಗೆ ಪರಿಹಾರ ಕೋರಿ ಮೇಲ್ಕಂಡ ಅರ್ಜಿದಾರರು ಅರ್ಜಿಯನ್ನು ಈ ನ್ಯಾಯಾಲಯದಲ್ಲಿ ಸಲ್ಲಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿ ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೇಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೆ ಇದ್ದಲ್ಲಿ ಅರ್ಜಿದಾರರನ್ನು ಹೊರತುಪಡಿಸಿ ಮೃತನ ಅವಲಂಬಿತರು ಯಾರೂ ಇಲ್ಲ ಎಂದು ಪರಿಗಣಿಸಿ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಕೈಗೊಳ್ಳಲಾಗುವುದು.

**ಕೆ.ಜಿ. ಜಾನ್ಸನ್**
ಪಿ.ಆರ್. 381 ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಉಪವಿಭಾಗ–1, ಚಿಕ್ಕಮಗಳೂರು.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ದ.ಕ. ಉಪ ವಿಭಾಗ–2,**
**ಬೆಂದೂರ್ ವೆಲ್ ವೃತ್ತ, ಕಂಕನಾಡಿ, ಮಂಗಳೂರು–2 ಇವರ ನ್ಯಾಯಾಲಯದಲ್ಲಿ**
**ಸಂಖ್ಯೆ:ಡಬ್ಲ್ಯೂಸಿಎ:ಎಸ್ಆರ್–10/09 ಎಫ್ ದಿನಾಂಕ: 23ನೇ ಏಪ್ರಿಲ್ 2009**

**ಅರ್ಜಿದಾರರು**

ರೇವತಿ ಮೃತ ಚಂದ್ರಶೇಖರ ರವರ ಮಡದಿ 'ಅನಿಲ ಮನೆ' ಸಿರಿಬಾಗಿಲು ವಿಲೇಜ್ ಗುಂಡ್ಯಾ ಪುತ್ತೂರು ತಾಲ್ಲೂಕು.

**ಪ್ರತಿವಾದಿಗಳು**

1. ಶ್ರೀ ಶರ ಪ್ರಸಾದ, ದಯನಂದ ಗೌಡರ ಮಗ ಕುದೋಳ ಹೌಸ್ ಅಲೆಟ್ಟಿ ವಿಲೇಜ್ ಮತ್ತು ಅಂಚೆ ಸುಳ್ಯ ತಾಲ್ಲೂಕು.
2. ಶ್ರೀಮತಿ ದಾಸ ಮರ್ಸಸೆ ಬೊ.ಸಲಿನ ಪ್ರಾನ್ಸಿಸೊ ವಿ.ಡಿ. ಬೋ.ರವರ ಮಡದಿ ನಂ.3–23/1 ಕಾಸಬೊನೆಟಾ, ರೆಡಬಿಲ್ಡಿಂಗ್, ಟೌನ್, ಸೌತ್ ಮಂಗಳೂರು. ಮಂಗಳೂರು ದ.ಕ.

3. ಬ್ರಾಂಚ್ ಮ್ಯಾನೇಜರ್,
ಯುನೈಟೆಡ್ ಇಂಡಿಯಾ ಇನ್ಸೂರೆನ್ಸ್ ಕಂ.ಲಿ.,
ಪೊಪ್ಯುಲರ್ ಬಿಲ್ಡಿಂಗ್ ಎದುರು ಕೆ.ಎಸ್. ರಾವ್
ರೋಡ್ ಮಂಗಳೂರು–1.

**ಅಧಿಸೂಚನೆ**

ಅರ್ಜಿದಾರರಾದ ಶ್ರೀಮತಿ ರೇವತಿ ಇವರು ತಮ್ಮ ಮಗನಾದ ಶ್ರೀ ನಾಗರಾಜ್ ಇವರು 1ನೇ ಪ್ರತಿವಾದಿಗಳಲ್ಲಿ ಕೆಲಸಗಾರರಾಗಿದ್ದು, ಕೆಲಸದಲ್ಲಿ ನಿರತರಾಗಿದ್ದಾಗ, ದಿನಾಂಕ: 08.07.2008 ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ತಿಳಿಸಿ, ಅವಲಂಬಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿ, ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆಯು ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಣೆಯಾದಲ್ಲಿ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೈಮ್ ಅರ್ಜಿ: ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದು ಈ ಮೂಲಕ ತಿಳಿಸಲಾಗಿದೆ.

**ಹೆಚ್. ಗೋಪಾಲಗೌಡ**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ದ.ಕ. ಉಪ ವಿಭಾಗ–2, ಮಂಗಳೂರು.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ದ.ಕ. ಉಪ ವಿಭಾಗ–2, ಬೆಂದೂರ್ ವೆಲ್ ವೃತ್ತ, ಕಂಕನಾಡಿ, ಮಂಗಳೂರು–2 ಇವರ ನ್ಯಾಯಾಲಯ**

**ಸಂಖ್ಯೆ:ಡಬ್ಲ್ಯೂಸಿಎ:ಎಸ್‌ಆರ್–11/2009 ಎಫ್ ದಿನಾಂಕ: 23ನೇ ಏಪ್ರಿಲ್ 2009**

**ಅರ್ಜಿದಾರರು**

1. ಮಂಜವ್ವ ಮೃತ ದರ್ಮಣ್ಣರವರ ಮಡದಿ
2. ಕುಟನಕೇರಿ ಹನುಮವ್ವ, ಮೃತ ಹನುಮಂತರವರ ಮಡದಿ 699/Z ಮೂಡಲಗೇರಿ ಮೂಡಲಗೇರಿ ವಿಲೇಜ್ ಮತ್ತು ಅಂಚೆ, ಬಾದಾಮಿ ತಾಲ್ಲೂಕು, ಬಾಗಲಕೋಟೆ ಡಿಸ್ಟ್ರಿಕ್ಟ್.

**ಪ್ರತಿವಾದಿಗಳು**

1. ಶ್ರೀ ಮೋಹನ ಕುಮಾರ ಶೆಟ್ಟಿ ಮಹಾಬಲ ಶೆಟ್ಟಿಯವರ ಮಗ ಸೊರ್ನಾಡ ಹೌಸ್ ಸೊರ್ನಡ ವಿಲೇಜ್ ಮತ್ತು ಅಂಚೆ ಬಂಟ್ವಾಳ ತಾಲ್ಲೂಕು. ದ.ಕ.
2. ದಿ ಬ್ರಾಂಚ್ ಮ್ಯಾನೇಜರ್,
ನ್ಯಾಷನಲ್ ಇನ್ಸೂರೆನ್ಸ್ ಕಂಪನಿ. ಲಿ.,
3ನೇ ಮಹಡಿ ಗಣೇಶ್ ಬಿಲ್ಡಿಂಗ್ ಬಿ.ಸಿ.ರೋಡ್,
ಬಂಟ್ವಾಳ ತಾಲ್ಲೂಕು

**ಅಧಿಸೂಚನೆ**

ಅರ್ಜಿದಾರರಾದ ಶ್ರೀಮತಿ ಮಂಜವ್ವ ಇವರು ತಮ್ಮ ಗಂಡನಾದ ಶ್ರೀ ದರ್ಮಣ್ಣ ಇವರು 1ನೇ ಪ್ರತಿವಾದಿಗಳಲ್ಲಿ ಕೆಲಸಗಾರರಾಗಿದ್ದು, ಕೆಲಸದಲ್ಲಿ ನಿರತರಾಗಿದ್ದಾಗ, ದಿನಾಂಕ: 3.3.2009 ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ತಿಳಿಸಿ, ಅವಲಂಬಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಅರ್ಜಿದಾರರಲ್ಲದೆ ಬೇರೆ ಯಾರಾದರು ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿ, ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆಯು ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಣೆಯಾದಲ್ಲಿ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೈಮ್ ಅರ್ಜಿ: ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದು ಈ ಮೂಲಕ ತಿಳಿಸಲಾಗಿದೆ.

**ಹೆಚ್. ಗೋಪಾಲಗೌಡ**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ದ.ಕ. ಉಪ ವಿಭಾಗ–2, ಮಂಗಳೂರು.

ಪಿ.ಆರ್. 382

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆಯಡಿ ಆಯುಕ್ತರು, ಗದಗ ಜಿಲ್ಲೆ, ಗದಗ ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ:ಕಾಅಗ/ಕಾನಪ/ಎಫ್–24/09/71, ದಿನಾಂಕ: 28ನೇ ಏಪ್ರಿಲ್ 2009**

**ಅರ್ಜಿದಾರರು**

1. ಶ್ರೀಮತಿ ದೇವಕ್ಕ ದುರ್ಗಪ್ಪ ಹರಿಜನ,
2. ನಿಂಗಪ್ಪ ದುರ್ಗಪ್ಪ ಹರಿಜನ,
3. ಮೈಲಾರಪ್ಪ ದುರ್ಗಪ್ಪ ಹರಿಜನ
4. ಶ್ರೀಮತಿ ಮರದವ್ವ D/o ಗಾಳೆಪ್ಪ ಹರಿಜನ
   ವಾಸ: ಗೋಜನೂರು, ತಾ: ಶಿರಹಟ್ಟಿ, ಜಿ॥ ಗದಗ.

**ಪ್ರತಿವಾದಿಗಳು**

1. ಮಹಾದೇವಪ್ಪ ದೊಡ್ಡ ನಿಂಗಪ್ಪ ಬಟ್ಟೂರ,
   ವಾಸ: ಮುಳಗುಂದ, ತಾ:ಜಿ: ಗದಗ.
2. ಯುನೈಟೆಡ್ ಇಂಡಿಯಾ ಇನ್ಸೂರೆನ್ಸ್ ಕಂ.ಲಿ.,
   ಡಿವಿಜನಲ್ ಮ್ಯಾನೇಜರ್, 1ನೇ ಮಹಡಿ,
   ಎನ್ಕೆ ಕಾಂಪ್ಲೆಕ್ಸ್, ಕೇಶ್ವಾಪುರ, ಹುಬ್ಬಳ್ಳಿ.

**ಪ್ರಕಟಣೆ**

ಅರ್ಜಿದಾರರಾದ ಶ್ರೀಮತಿ ದೇವಕ್ಕ ದುರ್ಗಪ್ಪ ಹರಿಜನ, 2) ನಿಂಗಪ್ಪ ದುರ್ಗಪ್ಪ, ಹರಿಜನ, 3) ಮೈಲಾರಪ್ಪ ದುರ್ಗಪ್ಪ ಹರಿಜನ, 4) ಶ್ರೀಮತಿ ಮರದವ್ವ D/o ಗಾಳೆಪ್ಪ ಹರಿಜನ ವಾಸ: ಗೋಜನೂರು, ತಾ॥ ಶಿರಹಟ್ಟಿ, ಜಿ॥ಗದಗ ಇವರು, ತಾವು ಮೃತ ದುರ್ಗಪ್ಪ S/o ಮರದವ್ವ ಹರಿಜನ ಇವರ ಹೆಂಡತಿ, ಮಕ್ಕಳು ಮತ್ತು ತಾಯಿ ಎಂದೂ, ಅವರ ಮರಣದಿಂದ ನಷ್ಟಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ದುರ್ಗಪ್ಪ S/o ಮರದವ್ವ ಹರಿಜನ ಇವರು ಒಂದನೇ ಪ್ರತಿವಾದಿಗಳಾದ ಮಹಾದೇವಪ್ಪ ದೊಡ್ಡ ನಿಂಗಪ್ಪ ಬಿಟ್ಟೂರ, ವಾಸಾ ಮುಳಗುಂದ, ಜಿ॥ ಗದಗ ಇವರಲ್ಲಿ ಹಮಾಲ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲಿ ಅಥವಾ ಬೇರೆ ಯಾರಾದರೂ ಮೃತರ ಕಾನೂನುಬದ್ಧ ಆಶ್ರಿತರೆಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಆಕ್ಷೇಪಣೆಗಳನ್ನಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ಕಾರ್ಮಿಕ ಅಧಿಕಾರಿ ಗದಗ ಜಿಲ್ಲೆ ಗದಗ ಹಾಗೂ ಕಾರ್ಮಿಕ ನಷ್ಟ ಪರಿಹಾರ
ಕಾನೂನು ಅಡಿ ಆಯುಕ್ತರು.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆಯಡಿ ಆಯುಕ್ತರು, ಗದಗ ಜಿಲ್ಲೆ, ಗದಗ ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ:ಕಾಅಗ/ಕಾನಪ/ಎಫ್–25/09/74, ದಿನಾಂಕ: 28ನೇ ಏಪ್ರಿಲ್ 2009**

**ಅರ್ಜಿದಾರರು**

1. ಶ್ರೀಮತಿ ರಹ ಮತಬೀ ಕೋಂ ಪೀರಸಾಬ ಬೂದಿಹಾಳ
2. ಹುಸೇನಸಾಬ ತಂದೆ: ಪೀರಸಾಬಬೂದಿಹಾಳ
   ವಾಸ: ಬೂದಿಹಾಳ, ತಾ॥ ಗದಗ.

**ಪ್ರತಿವಾದಿಗಳು**

1. ಶ್ರೀ ಮಹಾದೇವಪ್ಪ ತಂದೆ: ದೊಡ್ಡನಿಂಗಪ್ಪ ಬಟ್ಟೂರ,
   PWD ಗುತ್ತಿಗೆದಾರರು, ವಾಸ: ಮುಳಗುಂದ ತಾ॥ ಗದಗ.
2. ದ ಯುನೈಟೆಡ್ ಇಂಡಿಯಾ ಇನ್ಸೂರೆನ್ಸ್ ಕಂ.ಲಿ.,
   1ನೇ ಮಹಡಿ ಎನ್ಕೆ ಕಾಂಪ್ಲೆಕ್ಸ್, ಕೇಶ್ವಾಪುರ, ಹುಬ್ಬಳ್ಳಿ.

**ಪ್ರಕಟಣೆ**

ಅರ್ಜಿದಾರರಾದ ಶ್ರೀಮತಿ ರಹಮತ್ ಬೀ ಕೊಂ: ಪೀರಸಾಬಬೂದಿಹಾಳ, 2) ಹುಸೇನ ಸಾಬ ತಂದೆ: ಪೀರಸಾಬ ಬೂದಿಹಾಳ, ವಾಸ: ಬೂದಿಹಾಳ ತಾ॥ ಗದಗ ಇವರು, ತಾವು ಮೃತ ಪೀರಸಾಬಬೂದಿಹಾಳ ಇವರ ಹೆಂಡತಿ ಮತ್ತು ಮಗ ಎಂದೂ, ಅವರ ಮರಣದಿಂದ ನಷ್ಟಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಪೀರಸಾಬಬೂದಿಹಾಳ ಇವರು ಒಂದನೇ ಪ್ರತಿವಾದಿಗಳಾದ ಶ್ರೀ ಮಹಾದೇವಪ್ಪ ತಂದೆ ದೊಡ್ಡನಿಂಗಪ್ಪ ಬಟ್ಟೂರ, ವಾಸ: ಮುಳಗುಂದ ಇವರಲ್ಲಿ ಹಮಾಲ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲಿ ಅಥವಾ ಬೇರೆ ಯಾರಾದರೂ ಮೃತರ ಕಾನೂನುಬದ್ಧ ಆಶ್ರಿತರೆಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಆಕ್ಷೇಪಣೆಗಳನ್ನಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ಕಾರ್ಮಿಕ ಅಧಿಕಾರಿ ಗದಗ ಜಿಲ್ಲೆ ಗದಗ ಹಾಗೂ ಕಾರ್ಮಿಕ ನಷ್ಟ ಪರಿಹಾರ
ಕಾನೂನು ಅಡಿ ಆಯುಕ್ತರು.

ಪಿ.ಆರ್. 395

## ತಹಶೀಲ್ದಾರ್‌ರವರ ಕಾರ್ಯಾಲಯ, ಕೃಷ್ಣರಾಜಪೇಟೆ ತಾಲ್ಲೂಕು, ಕೃಷ್ಣರಾಜಪೇಟೆ

ನಮೂನೆ–38

(ನಿಯಮ 11ರ ಮತ್ತು 124)

ಸಂಖ್ಯೆ: ಎಂಎಸ್‌ಸಿ (ಆರ್.8) ಸಿಆರ್:1:2008–09, ದಿನಾಂಕ:13ನೇ ಮಾರ್ಚ್, 2009

(1) ಜಪ್ತಿ ಮಾಡಲ್ಪಟ್ಟ ಸ್ವತ್ತಿನ ಹರಾಜು ಬಗೆಗಿನ ಇಸ್ತಿಹಾರ್ ಮತ್ತು ಬರಹದ ಮೂಲಕವಾದ ನೋಟಿಸಿನ ನಮೂನೆ

ಶ್ರೀ ಶಿವಕುಮಾರ್ ಬಿನ್ ದೊಡ್ಡಸೋಮಶೆಟ್ಟಿ ಇವರಿಂದ ಸಲ್ಲಿಸಬೇಕಾದ ರೂ.73500–00 ರೂ.ಗಳ ನ್ಯಾಯಾಲಯದ ಹಣದ ಬಾಬ್ತು ಸದರಿ ದೊಡ್ಡಸೋಮಶೆಟ್ಟಿ ಬಿನ್ ಮಂಚಶೆಟ್ಟಿ ರವರಿಗೆ ಸೇರಿದ ಈ ಕೆಳಗೆ ನಮೂದಿಸಿರುವ ಸ್ವತ್ತು ಜಪ್ತಿ ಮಾಡಲ್ಪಟ್ಟಿರುವುದರಿಂದ ಮತ್ತು ಸದರಿ ಮೊಬಲಗನ್ನು ಸದರಿ ಸ್ವತ್ತಿನ ಜಪ್ತಿಯಿಂದ ಮತ್ತು ಮಾರಾಟದಿಂದ ಉಂಟಾದ ನ್ಯಾಯ ಸಮ್ಮತದ ಸಮನ್ಸ್ ಖರ್ಚುಗಳ ಮತ್ತು ವೆಚ್ಚಗಳ ಸಹಿತ ಸದರಿ ಸ್ವತ್ತಿನ ಮಾರಾಟದ ಮೂಲಕ ವಸೂಲು ಮಾಡುವುದು ಅವಶ್ಯಕವಾಗಿರುವುದರಿಂದ ಈ ಮೂಲಕ ತಿಳಿಯಪಡಿಸುವುದೇನೆಂದರೆ ದಿನಾಂಕ: 31.03.2009 ರಂದು ಬೆಳಿಗ್ಗೆ 11–00 ಗಂಟೆಗೆ ಕೃಷ್ಣರಾಜಪೇಟೆ ತಹಶೀಲ್ದಾರ್‌ರವರಿಂದ ನೇಮಕ ಮಾಡಲ್ಪಟ್ಟ ಅಕ್ಕಿಹೆಬ್ಬಾಳು, ಹೋಬಳಿ ರಾಜಸ್ವ ನಿರೀಕ್ಷಕರು ತಾಲ್ಲೂಕಿನ ಹೊಸಮಾವಿನಕೆರೆ ಗ್ರಾಮದ ಈ ಕೆಳಗೆ ನಮೂದಿಸಲ್ಪಟ್ಟ ಸ್ವತ್ತಿನಲ್ಲಿ ಸಂಬಂಧವಾದಿ ಶಿವಕುಮಾರ್ ಬಿನ್ ದೊಡ್ಡಸೋಮಶೆಟ್ಟಿ ಅವರ ಹಕ್ಕನ್ನು ಮತ್ತು ಪ್ರಯೋಜನದಾರರ ಮತ್ತು ಸದರಿಯವರು ತಮ್ಮ ಸ್ವಂತ ಪ್ರಯೋಜನಕ್ಕಾಗಿ ಕಾನೂನಿಗನುಸಾರವಾಗಿ ಈಗ ಸುಸಂಗತವಾಗಿ ಚಲಾಯಿಸಬಹುದಾದಂತಹ ಹಕ್ಕು ಪಟ್ಟಿ ಮತ್ತು ಪ್ರಯೋಜನಾಂಶವನ್ನು ವಿಲೇ ಮಾಡುವ ಸಮಸ್ತ ಅಧಿಕಾರವನ್ನು ಅನಿರ್ಭಂದವಾಗಿ ಹರಾಜಿನ ಮೂಲಕ ಹೆಚ್ಚು ಬೆಲೆಗೆ ಕೊಡುವವರಿಗೆ ಮಾರಾಟ ಮಾಡುತ್ತದೆ.

| | | | | |
|---|---|---|---|---|
| ಸದರಿ ಸ್ಥಿರ ಸ್ವತ್ತಿನ ವಿವರ: | 304:ಪೈ | 307:1ಪೈ | 308:ಪೈ ಹಾಗೂ | 246:2ರ |
| ಸ್ವತ್ತಿನ ಅಳತೆ: | 0–15 ಗುಂಟೆ | 0–10 ಗುಂಟೆ | 0–13 ಗುಂಟೆ ಖುಷ್ಕಿ | 1–02 ಎಕರೆ ತರಿ |

| | ಅಲಂಬಾಡಿಕಾವಲು | ಅಲಂಬಾಡಿ |
|---|---|---|
| ಚೆಕ್ಕುಬಂದಿ: | 1) ಉತ್ತರಕ್ಕೆ: ಹೆಚ್.ಡಿ. ಸ್ವಾಮೀಗೌಡರ ಜಮೀನು | ಗಿರಿಶೆಟ್ಟರ ಜಮೀನು |
| | 2) ದಕ್ಷಿಣಕ್ಕೆ: ರಾಮಚಂದ್ರರವರ ಜಮೀನು | ಕೆಂಪಶೆಟ್ಟಿ ಜಮೀನು |
| | 3) ಪೂರ್ವಕ್ಕೆ ನಾಲೆ | ಹನುಮಶೆಟ್ಟಿ ಜಮೀನು |
| | 4) ಪಶ್ಚಿಮಕ್ಕೆ ರಸ್ತೆ | ರಾಮಕೃಷ್ಣಶೆಟ್ಟಿ ಜಮೀನು. |

### ಹರಾಜಿನ ಷರತ್ತುಗಳು:

1) 31.03.2009ನೇ ದಿನಾಂಕದಂದು ಹರಾಜಿಗೆ ಇಟ್ಟಿರುವ ಜಮೀನು ಮುಂಭಾಗದಲ್ಲಿ ಹರಾಜು ನಡೆಸಲಾಗುವುದು ಅವಶ್ಯಕವಾದರೆ ವಿದ್ಯೋಷಣೆಯಲ್ಲಿ ನಿರ್ದಿಷ್ಟಪಡಿಸಿದ ಸ್ಥಿರ ಸ್ವತ್ತು ಮಾರಾಟವಾಗುವವರೆಗೆ (ರಜಾ ದಿನಗಳು ಹೊರತು) ದಿನಾಂಕವನ್ನು ಹರಾಜನ್ನು ಮುಂದುವರಿಸುವ ಅಧಿಕಾರವನ್ನು ತಹಶೀಲ್ದಾರ್‌ರವರು ಹೊಂದಿರುತ್ತಾರೆ.

2) ಯಾವ ಹಣದ ವಸೂಲಿಯ ಸಲುವಾಗಿ ಸ್ಥಿರ ಸ್ವತ್ತನ್ನು ಮಾರಾಟ ಮಾಡಲಾಗುತ್ತದೆಯೋ ಅದರ ಹಣವನ್ನು ಪಡೆಯಲು ಹಕ್ಕುಳ್ಳ ವ್ಯಕ್ತಿ ಜಿಲ್ಲಾಧಿಕಾರಿಯವರ ಅನುಮತಿ ಇಲ್ಲದೇ ಹರಾಜಿನಲ್ಲಿ ಸವಾಲು ಮಾಡಲು ಅಥವಾ ಸ್ವತ್ತಿನಲ್ಲಿ ಖರೀದಿ ಮಾಡಲು ಅವಕಾಶವಿರುವುದಿಲ್ಲ.

3) ಯಾವ ಹಣದ ವಸೂಲಿಗಾಗಿ ಸ್ಥಿರ ಸ್ವತ್ತನ್ನು ಹರಾಜು ಮಾಡಲಾಗುತ್ತಿದೆಯೇ ಅಂತಹ ಹಕ್ಕು ವ್ಯಕ್ತಿಯು ಜಿಲ್ಲಾಧಿಕಾರಿಯವರು ಅನುಮತಿ ಇಲ್ಲದೇ ತಾನಾಗಲೀ ಅಥವಾ ಇತರೆ ವ್ಯಕ್ತಿಯ ಮೂಲಕವಾಗಲೀ ಖರೀದಿ ಮಾಡಿದರೆ ಮಾರಾಟದಿಂದ ಯಾವ ಹಿತಾಸಕ್ತಿಗೆ ಧಕ್ಕೆ ಉಂಟಾಗಿದೆಯೇ ಆ ಬಾಕಿದಾರರನ್ನು ಅಥವಾ ಯಾವನೇ ಇತರ ವ್ಯಕ್ತಿಯ ಅರ್ಜಿಯ ಮೇಲೆ ತಹಶೀಲ್ದಾರರು ಎಂದು ಮನಗಂಡ ಪಕ್ಷದಲ್ಲಿ ಆದೇಶದ ಮೂಲಕ ಆ ಹರಾಜನ್ನು ತಳ್ಳಿ ಹಾಕಬಹುದು. ಆ ರೀತಿ ಹಾಕುವುದರಿಂದ ಉಂಟಾಗಬಹುದಾದ ನಷ್ಟವನ್ನು ಮತ್ತು ಅಂತಹ ಅರ್ಜಿಯ ಹಾಗೂ ಅದರ ಖರ್ಚುಗಳನ್ನು ಯಾವುದಕ್ಕಾಗಿ ಹರಾಜನ್ನು ನಡೆಸಲಾಗಿದೆಯೇ ಅಂತಹ ವ್ಯಕ್ತಿಯು ಸಂದಾಯ ಮಾಡಬೇಕಾಗಿರುತ್ತದೆ.

4) ಹರಾಜನ್ನು ನಡೆಸಲು ನೇಮಕ ಹೊಂದಿರುವ ಯಾವುದೇ ಅಧಿಕಾರಿಯು ಮತ್ತು ಅಂತಹ ಅಧಿಕಾರಿಯು ಅತ್ಯಂತ ಹೆಚ್ಚಿನ ಸವಾಲನ್ನು ಅಂಗೀಕರಿಸುವ ಅಥವಾ ನಿರಾಕರಿಸುವ ವಿವೇಚನೆಯನ್ನು ಹೊಂದಿರುತ್ತಾರೆ.

5) ಹರಾಜನ್ನು ನಡೆಸಲು ನೇಮಕ ಹೊಂದಿರುವ ಯಾವುದೇ ಅಧಿಕಾರಿಯು ಮತ್ತು ಅಧಿಕಾರಿಯು ನೇಮಿಸಿರುವ ಅವರಿಗೆ ಅಧಿಕವಾಗಿರುವ ಯಾವುದೇ ವ್ಯಕ್ತಿಯು ಪ್ರತ್ಯೇಕವಾಗಿ ಪರೋಕ್ಷವಾಗಿ ಆ ಸ್ವತ್ತಿನ ಬಗ್ಗೆ ಸವಾಲು ಮಾಡತಕ್ಕದ್ದಲ್ಲ ಅಥವಾ ಕೊಂಡುಕೊಳ್ಳತಕ್ಕದ್ದಲ್ಲ.

6) ಹರಾಜಿನ ದಿನಾಂಕದಂದು ಯಾವ ಸವಾಲು ಇಲ್ಲದಿದ್ದರೆ ಸ್ವತ್ತನ್ನು ಸರ್ಕಾರವು ಖರೀದಿ ಮಾಡಬಹುದಾಗಿದೆ.

7) ಹರಾಜಿನಲ್ಲಿ ಸವಾಲು ಮಾಡುವ ಇಚ್ಛೆಯುಳ್ಳ ಪ್ರತಿಯೊಬ್ಬ ಸವಾಲುದಾರರು ಮುಂಗಡದ ಹರಾಜಿನ ವೇಳೆಗೆ ಮೊದಲು 500–00 ರೂ.ಗಳನ್ನು ಠೇವಣಿ ಕಟ್ಟಿ ಹರಾಜಿನಲ್ಲಿ ಭಾಗವಹಿಸಬೇಕಾಗಿರುತ್ತೆ ಮತ್ತು ಅಂತಿಮ ಸವಾಲುದಾರರು ಹರಾಜು ಆದ ಕೂಡಲೇ ಸವಾಲಿನ ಮೇರೆಗೆ ನಿರ್ದೇಶಿಸಿದ ಶೇಕಡಾ 25ರಷ್ಟು ಹರಾಜು ಮುಗಿದ ಕೂಡಲೇ ಸ್ಥಳದಲ್ಲಿ ಪಾವತಿ

ಮಾಡಿ ಉಳಿಕೆ ಹಣವನ್ನು ಪೂರ್ಣಗೊಂಡ ಹದಿನೈದು ದಿವಸದೊಳಗಾಗಿ ಪಾವತಿ ಮಾಡತಕ್ಕದ್ದು. ತಪ್ಪಿದಲ್ಲಿ ಆಸ್ತಿಯನ್ನು ಪುನಃ ಬಹಿರಂಗವಾಗಿ ಹರಾಜು ಮಾಡಲಾಗುವುದು ಮತ್ತು ಹಣ ಪಾವತಿ ಮಾಡಲು ತಪ್ಪಿದ ಸವಾಲುದಾರರ ಠೇವಣಿ ಹಣವಾದ ರೂ.500–00 ಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು ಮತ್ತು ಸಂದಾಯ ಮಾಡಲು ತಪ್ಪಿದ ಕಾರಣದಿಂದ ಅದು ಮರು ಹರಾಜಿನಲ್ಲಿ ಉಂಟಾಗಬಹುದಾದ ನಷ್ಟ ಮತ್ತು ಮಾಡಲು ತಪ್ಪಿದಲ್ಲಿ ಖರೀದಿದಾರನಿಂದ ವಸೂಲು ಮಾಡಲಾಗುತ್ತೆ.

ಮಾರಾಟ ಮಂಡ್ಯ ಜಿಲ್ಲಾಧಿಕಾರಿಯವರ ಸ್ಥಿರೀಕರಣಕ್ಕೆ ಒಳಪಟ್ಟಿರುತ್ತೆ. ಮಾರಾಟವನ್ನು ಸ್ಥಿರೀಕರಿಸಿದ ತರುವಾಯ ಯಶಸ್ವಿ ಸವಾಲುದಾರರ ಹೆಸರಿನಲ್ಲಿ ಖರೀದಿಸಲು ಪ್ರಮಾಣಪತ್ರ ಕೊಡಲಾಗುವುದು. ಹಾಗೂ ನೊಂದಣಿ ಅಧಿಕಾರಿಗಳಲ್ಲಿ ಅಖೈರು ಬಿಡ್ಡುದಾರರು ನೊಂದಣಿ ಫೀ ಸಂದಾಯ ಮಾಡಿ ನೊಂದಣಿ ಮಾಡಿಸಿಕೊಳ್ಳುವುದು.

ತಹಶೀಲ್ದಾರ್,
ಕೃಷ್ಣರಾಜಪೇಟೆ ತಾಲ್ಲೂಕು.

ಪಿ.ಆರ್.290

## ಸಹಕಾರ ಇಲಾಖೆ

**ಸಹಕಾರ ಸಂಘಗಳ ಉಪನಿಬಂಧಕರು, ದಾವಣಗೆರೆ ಜಿಲ್ಲೆ, ದಾವಣಗೆರೆ ಇವರ ಕಛೇರಿ**

**ನಂ.ಡಿಆರ್/ಡಿವಿಜಿ/ಎಲ್‌ಕ್ಯೂಡಿ/ಸಿಆರ್–05/2008–09, ದಿನಾಂಕ:11ನೇ ಡಿಸೆಂಬರ್, 2008**

**ವಿಷಯ:** ಸ್ಥಗಿತಗೊಂಡಿರುವ ಗಾಯತ್ರಿ ಮಹಿಳಾ ಪತ್ತಿನ ಸಹಕಾರ ಸಂಘ ನಿ., ದಾವಣಗೆರೆ, ಇದನ್ನು 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72 ಮತ್ತು 70ರನ್ವಯ ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ:** 1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರ ಪ್ರಸ್ತಾವನೆ ದಿನಾಂಕ:10.11.2008.
2) ಈ ಕಛೇರಿಯ ಕಾರಣ ಕೇಳಿ ನೋಟೀಸ್ ಸಮಸಂಖ್ಯೆ ಪತ್ರ ದಿನಾಂಕ:26.09.2008.

**ಪ್ರಸ್ತಾವನೆ:**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರು ಉಲ್ಲೇಖ(1)ರಲ್ಲಿ ಕಾಣಿಸಿದ ಪ್ರಸ್ತಾವನೆ ಪ್ರಕಾರ ಮೇಲ್ಕಂಡ ಸಂಘದ ಕಾರ್ಯಚಟುವಟಿಕೆಗಳು ಸ್ಥಗಿತಗೊಂಡಿರುತ್ತದೆ. ಸಂಘದ ಆಡಳಿತ ಮಂಡಳಿ ಸಂಘದ ಅಭಿವೃದ್ಧಿ ಬಗ್ಗೆ ಗಮನಿಸುವಲ್ಲಿ ವಿಫಲವಾಗಿರುತ್ತದೆ. ಮತ್ತು ಸಂಘವನ್ನು ಪುನಶ್ಚೇತನಗೊಳಿಸುವಲ್ಲಿ ಆಸಕ್ತಿ ಇರುವುದಿಲ್ಲ. ಈ ಬಗ್ಗೆ ಉಲ್ಲೇಖ (2)ರ ನೋಟೀಸು ನೀಡಿದ್ದು ಸಂಘವು ಅಸ್ತಿತ್ವದಲ್ಲಿರದ ಬಗ್ಗೆ ಮಹಜರು ಮಾಡಿಸಿ, ಕಾರಣ ಸಂಬಂಧಿಸಿದ ನಿರ್ದೇಶಕರಿಗೆ ಜಾರಿ ಮಾಡಿಸಲು ಸಾಧ್ಯವಾಗಿರುವುದಿಲ್ಲವೆಂದು, ಉಲ್ಲೇಖ (1)ರ ಪತ್ರ ದಿನಾಂಕ:10.11.2008ರಲ್ಲಿ ವರದಿ ಸಲ್ಲಿಸಿರುತ್ತಾರೆ. ಇದಕ್ಕೆ ಯಾರಿಂದಲೂ ಪ್ರತಿಕ್ರಿಯೆ ಬಂದಿರುವುದಿಲ್ಲ. ಈ ಸಂಘದಿಂದ ಸದಸ್ಯರಿಗೆ ಯಾವ ರೀತಿಯ ಪ್ರಯೋಜನವೂ ದೊರೆಯುತ್ತಿಲ್ಲ. ಸಂಘವನ್ನು ಇದೇ ರೀತಿ ಮುಂದುವರೆಯಲು ಬಿಟ್ಟಲ್ಲಿ ಸಂಘವು ಇನ್ನಷ್ಟು ಅಧೋಗತಿಗೆ ಹೋಗುವ ಸಂಭವವಿರುವುದರಿಂದ ಸಮಾಪನೆಗೊಳಿಸುವುದೇ ಸೂಕ್ತವೆಂದು ಕಂಡುಬಂದಿರುವುದರಿಂದ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಮತ್ತು 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72(2)ರನ್ವಯ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69: ಸಿಎಲ್‌ಎಂ:2001, ದಿನಾಂಕ:21.11.2001ರ ಪ್ರಕಾರ ದತ್ತವಾದ ಅಧಿಕಾರದನ್ವಯ ದಾವಣಗೆರೆ ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರು, ಬಿ. ಕುಬೇರಪ್ಪ, ಕೆ.ಸಿ.ಎಸ್. ಆದ ನಾನು ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ, ಗಾಯತ್ರಿ, ಮಹಿಳಾ ಪತ್ತಿನ ಸಹಕಾರ ಸಂಘ ನಿ., ವಿನೋಬನಗರ, ದಾವಣಗೆರೆ, ದಾವಣಗೆರೆ ತಾಲ್ಲೂಕು ಇದನ್ನು ಸಮಾಪನೆಗೊಳಿಸಿ, 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 70(1)ರನ್ವಯ ಸಹಕಾರ ಸಂಘಗಳ ನಿರೀಕ್ಷಕರು 1ನೇ ವೃತ್ತ ದಾವಣಗೆರೆ ಇವರನ್ನು ಸಂಘದ ಸಮಾಪನಾಧಿಕಾರಿಯನ್ನಾಗಿ ಅಧಿಕ ಪ್ರಭಾರದಲ್ಲಿ ನೇಮಿಸಿರುತ್ತೇನೆ. ಸಮಾಪನಾಧಿಕಾರಿಯು ಸಂಘದ ವಿಶಿಷ್ಟ ಪ್ರಭಾರವನ್ನು ಮತ್ತು ಸಂಘದ ಆಸ್ತಿಗಳನ್ನು ಸಂಘದ ಕಾರ್ಯದರ್ಶಿ ಅಥವಾ ಸಂಘದ ಪ್ರಭಾರ ಹೊಂದಿದ ಯಾವುದೇ ವ್ಯಕ್ತಿಯಿಂದ 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 73(1) ಮತ್ತು 74ರ ನಿಯಮದ ಪ್ರಕಾರ ಪಡೆದುಕೊಳ್ಳತಕ್ಕದ್ದು.

ನನ್ನ ಸ್ವಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನ ದಿನಾಂಕ:11.12.2008ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪನಿಬಂಧಕರು,
ದಾವಣಗೆರೆ ಜಿಲ್ಲೆ, ದಾವಣಗೆರೆ.

ಪಿ.ಆರ್.1

## ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

**ಅಧಿಸೂಚನೆ**

**ಸಂಖ್ಯೆ: ವಾಕೈ 18 ಜಕೈಸೇ 2008, ಬೆಂಗಳೂರು, ದಿನಾಂಕ:11ನೇ ಫೆಬ್ರವರಿ, 2009**

**ವಿಷಯ:** ಕೈಮಗ್ಗ ಮತ್ತು ಜವಳಿ ಇಲಾಖೆಯ ಸಹಾಯಕ ನಿರ್ದೇಶಕರ ಅಂತಿಮ ಜೇಷ್ಠತಾ ಪಟ್ಟಿ ಕುರಿತು.

ಕೈಮಗ್ಗ ಮತ್ತು ಜವಳಿ ಇಲಾಖೆಯ ಸಹಾಯಕ ನಿರ್ದೇಶಕರ ವೃಂದದ ಕರಡು ಜೇಷ್ಠತಾ ಪಟ್ಟಿಯನ್ನು ದಿನಾಂಕ:01.06.2008ರಲ್ಲಿದ್ದಂತೆ ದಿನಾಂಕ:04.10.2008ರಂದು ಪ್ರಕಟಿಸಿ ನಿಗದಿ ಪಡಿಸಿರುವ ಜೇಷ್ಠತೆ ಸಂಬಂಧಿಸಿದಂತೆ ಬಾಧಿತ ಅಧಿಕಾರಿಗಳಿಂದ ಆಕ್ಷೇಪಣೆ/ ಸಲಹೆಗಳಿದ್ದಲ್ಲಿ ಅವುಗಳನ್ನು ಸದರಿ ಅಧಿಸೂಚನೆ ಪ್ರಕಟಿಸಿದ 30 ದಿನಗಳ ಕಾಲಾವಕಾಶ ನೀಡಿ ಕರೆಯಲಾಗಿತ್ತು. ಸರ್ಕಾರವು ಸ್ವೀಕೃತಗೊಂಡ ಆಕ್ಷೇಪಣೆ ಹಾಗೂ ಸಲಹೆಗಳನ್ನು ಪರಿಶೀಲಿಸಿದ್ದು, ಸಹಾಯಕ ನಿರ್ದೇಶಕರ ವೃಂದದ ದಿನಾಂಕ:01.06.2008ರಲ್ಲಿದ್ದಂತೆ ಅಂತಿಮ ಜೇಷ್ಠತಾ ಪಟ್ಟಿಯನ್ನು ಇದಕ್ಕೆ ಲಗತ್ತಿಸಿರುವ ಅನುಬಂಧದಲ್ಲಿ ಪ್ರಕಟಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಗಣಪತಿ**

ಸರ್ಕಾರದ ಉಪ ಕಾರ್ಯದರ್ಶಿ,

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

**ದಿನಾಂಕ:01.06.2008ರಲ್ಲಿದ್ದಂತೆ ಕೈಮಗ್ಗ ಮತ್ತು ಜವಳಿ ಇಲಾಖೆಯ ಸಹಾಯಕ ನಿರ್ದೇಶಕರ ಅಂತಿಮ ಜೇಷ್ಠತಾ ಪಟ್ಟಿ**

**ವೇತನ ಶ್ರೇಣಿ ರೂ.12000–22650**

| ಕ್ರ. ಸಂ. | ಅಧಿಕಾರಿಗಳ ಹೆಸರು ಶ್ರೀಯುತರಾದ | ನೇರ ನೇಮಕಾತಿ ಮುಂಬಡ್ತಿ ಇತರೆ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ಪ್ರಸ್ತುತ ಹುದ್ದೆಯಲ್ಲಿ ಮುಂಬಡ್ತಿ/ ಹೊಂದಿದ ದಿನಾಂಕ |
|---|---|---|---|---|---|
| 1. | ಝುರೆಪ್ಪ ಜಿ ಮೊಳಕೇರಿ | ಮುಂಬಡ್ತಿ | 22.12.1960 | 23.09.1985 | 04.03.1995 |
| 2. | ಆನಂದ್ ವಿ. ಕಿತ್ತೂರು | ಮುಂಬಡ್ತಿ | 21.02.1960 | 10.09.1985 | 12.09.2001 |
| 3. | ವಿಜಯ್ ಕುಮಾರ್ ಬಿ. ನಿರಾಳೆ | ಮುಂಬಡ್ತಿ | 30.03.1960 | 10.09.1985 | 12.09.2001 |
| 4. | ಸಿ.ಎಸ್. ಯೋಗೀಶ್ | ಮುಂಬಡ್ತಿ | 22.06.1967 | 07.01.1994 | 12.09.2001 |
| 5. | ಎಸ್. ಪ್ರಕಾಶ್ | ಮುಂಬಡ್ತಿ | 14.04.1966 | 11.07.1994 | 12.09.2001 |
| 6. | ಬಿ. ಶ್ರೀಧರ್ ನಾಯಕ್ | ಮುಂಬಡ್ತಿ | 30.04.1970 | 03.01.1994 | 12.09.2001 |
| 7. | ಹೆಚ್.ಎಸ್. ಸೋಮನಗೌಡರ್ | ಮುಂಬಡ್ತಿ | 15.10.1961 | 10.01.1994 | 12.09.2001 |
| 8. | ಎ.ಸುರೇಶ್ ಕುಮಾರ್ | ಮುಂಬಡ್ತಿ | 07.06.1965 | 10.01.1994 | 12.09.2001 |
| 9. | ಎಸ್. ಮುದ್ದಯ್ಯ | ಮುಂಬಡ್ತಿ | 01.01.1964 | 15.07.1994 | 12.09.2001 |
| 10. | ಬಿ.ಟಿ. ಪಾಂಡುರಂಗಪ್ಪ | ಮುಂಬಡ್ತಿ | 02.06.1950 | 10.10.1972 | 18.08.2005 ವಯೋನಿವೃತ್ತಿ |
| 11. | ಪಿ.ಡಿ. ಪನ್ನೀರ್‌ಸೆಲ್ವಂ | ಮುಂಬಡ್ತಿ | 26.05.1957 | 16.01.1986 | 18.08.2005 |
| 12. | ಜಿ.ಪಿ. ಶ್ರೀನಿವಾಸಮೂರ್ತಿ | ಮುಂಬಡ್ತಿ | 28.07.1965 | 05.10.1988 | 18.08.2005 |
| 13. | ಎಸ್. ಜಗದೀಶ್ | ಮುಂಬಡ್ತಿ | 10.01.1959 | 16.01.1986 | 06.02.2008 |
| 14. | ಎಸ್.ಎಸ್. ಫಡಕೆ | ಮುಂಬಡ್ತಿ | 07.07.1963 | 16.01.1986 | 06.02.2008 |
| 15. | ದಿನೇಶ್ ಕೆ. ಹೆಬ್ಬಾರ್ | ಮುಂಬಡ್ತಿ | 30.10.1962 | 16.01.1986 | 06.02.2008 |
| 16. | ವೈ.ಎನ್. ಹಾವರ್ಗಿ | ಮುಂಬಡ್ತಿ | 01.06.1962 | 16.01.1986 | 06.02.2008 |
| 17. | ಎಂ.ಎಸ್. ಅತ್ತೀಮರದ್ | ಮುಂಬಡ್ತಿ | 25.05.1963 | 16.01.1986 | 06.02.2008 |
| 18. | ಬಿ.ಆರ್. ಯೋಗಿಶ್ | ಮುಂಬಡ್ತಿ | 22.07.1967 | 22.11.1990 | 06.02.2008 |
| 19. | ವೀರೇಶ್ ಎಸ್. ಧವಳೆ | ಮುಂಬಡ್ತಿ | 29.11.1963 | 16.01.1986 | 05.05.2008 |
| 20. | ಆರ್. ಲಿಂಗರಾಜು | ಮುಂಬಡ್ತಿ | 01.06.1965 | 16.01.1986 | 05.05.2008 |
| 21. | ಸಿ. ರವಿಕುಮಾರ್ | ಮುಂಬಡ್ತಿ | 12.03.1965 | 01.09.1989 | 05.05.2008 |
| 22. | ವಾಸುದೇವ ದೊಡ್ಡಮನಿ | ಮುಂಬಡ್ತಿ | 01.06.1966 | 18.12.1990 | 05.05.2008 |

**ಎಂ.ಎಸ್. ಗಣಪತಿ**

ಪಿ.ಆರ್.169

ಸರ್ಕಾರದ ಉಪ ಕಾರ್ಯದರ್ಶಿ,

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

## ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪನಿರ್ದೇಶಕರವರ ಕಾರ್ಯಾಲಯ, ರಾಯಚೂರು-584101

### ಅಂತಿಮ ನೋಟೀಸ್

**ಸಂಖ್ಯೆ: ಆವಿ1/ಅನಧಿಕೃತ.ಗೈ.ಹಾ/ದೂರು/59/2008-09, ದಿನಾಂಕ:15ನೇ ಡಿಸೆಂಬರ್, 2008**

**ವಿಷಯ:** ಶ್ರೀಮತಿ ಸುಮಾ, ಎಸ್.ಆರ್. ಸಂಗೀತ ಶಿಕ್ಷಕರು, ಸರ್ಕಾರಿ, ಮಾ.ಹಿ.ಪ್ರಾ.ಶಾಲೆ, ಯರಗೇರಾ, ತಾ:ಜಿ:ರಾಯಚೂರು ಇವರು ಅನಧಿಕೃತ ಗೈರು ಹಾಜರಿ ಕುರಿತು.

**ಉಲ್ಲೇಖ:**1) ಕ್ಷೇತ್ರ ಶಿಕ್ಷಣಾಧಿಕಾರಿಗಳು, ರಾಯಚೂರು ಇವರ ಪತ್ರಸಂಖ್ಯೆ: ಎ2/ಪ್ರಾ.ಶಾ.ಶಿ/ಅಗೈಹಾ/2008-09, ದಿನಾಂಕ:13.10.2008.

2) ಈ ಕಾರ್ಯಾಲಯದ ನೋಟೀಸಿನ ಸಂಖ್ಯೆ: ಅವಿ1/ದೂರು/59/2008-09, ದಿನಾಂಕ:07.11.2008.

ಮೇಲ್ಕಾಣಿಸಿದ ವಿಷಯಕ್ಕೆ ಸಂಬಂಧಿಸಿದಂತೆ ಮೇಲಿನ ಉಲ್ಲೇಖ-1ರನ್ವಯ ನೀವು ದಿನಾಂಕ:04.08.2005 ರಿಂದ ಇಲ್ಲಿಯವರೆಗೆ ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಾಗಿದ್ದು ನಿಮಗೆ ಮೇಲಿನ ಉಲ್ಲೇಖ-2ರ ಪ್ರಕಾರ ಹಲವು ನೋಟೀಸ್ ನೀಡಿದರೂ ಸಹ ಇದುವರೆಗೆ ಕರ್ತವ್ಯಕ್ಕೆ ಹಾಜರಾಗಿರುವುದಿಲ್ಲ. ಕಾರಣ ಈ ಅಂತಿಮ ನೋಟೀಸ್ ಕರ್ನಾಟಕ ರಾಜ್ಯ ಪತ್ರಿಕೆಯಲ್ಲಿ ಪ್ರಕಟವಾದ 15 ದಿವಸದೊಳಗಾಗಿ ನೀವು ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಾಗಿರುವುದಕ್ಕೆ ಸಮರ್ಥನಿಯವಾದ ದಾಖಲೆ ಸಹಿತ ಕಾರಣಗಳನ್ನು ಈ ಕಛೇರಿಗೆ ಸಲ್ಲಿಸಿ ಕರ್ತವ್ಯಕ್ಕೆ ಹಾಜರಾಗಲು ಅನುಮತಿ ಪಡೆದು ಕರ್ತವ್ಯಕ್ಕೆ ಹಾಜರಾಗತಕ್ಕದ್ದು.

ತಪ್ಪಿದ್ದಲ್ಲಿ ಕರ್ನಾಟಕ ನಾಗರೀಕ ಸೇವಾ ನಿಯಮ 1957ರ ನಿಯಮ 108ರ ಪ್ರಕಾರ ಸೇವೆಯಿಂದ ವಜಾಗೊಳಿಸಲಾಗುವುದೆಂದು ಈ ಮೂಲಕ ತಿಳಿಸಲಾಗಿದೆ.

ಉಪ-ನಿರ್ದೇಶಕರು (ಆ)

ಪಿ.ಆರ್.27 ಸಾರ್ವಜನಿಕ ಶಿಕ್ಷಣ ಇಲಾಖೆ, ರಾಯಚೂರು.

## ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

### ಕಾರ್ಯನಿರ್ವಾಹಕ ಅಭಿಯಂತರ ರವರ ಕಛೇರಿ, ಸಣ್ಣ ನೀರಾವರಿ ವಿಭಾಗ, ಕುಷ್ಟಗಿ

**ಸಂಖ್ಯೆ: ಕಾನಿಅ/ಸನೀವಿ/ ಕು/ಸಿ-1/2008-09/2415, ದಿನಾಂಕ:26ನೇ ಡಿಸೆಂಬರ್, 2008**

2005ರ ಮಾಹಿತಿ ಹಕ್ಕು ಅಧಿನಿಯಮ (2005ರ ಕೇಂದ್ರ ಕಾಯ್ದೆ 22)ರ ಅಡಿಯಲ್ಲಿ ಕಾರ್ಯನಿರ್ವಾಹಕ ಅಭಿಯಂತರು, ಸಣ್ಣ ನೀರಾವರಿ ವಿಭಾಗ, ಕುಷ್ಟಗಿ, ಕಛೇರಿಯನ್ನು ಸಾರ್ವಜನಿಕ ಪ್ರಾಧಿಕಾರವೆಂದು ಪರಿಗಣಿಸಿ ಸದರಿ ಅಧಿನಿಯಮದ ಸೆಕ್ಷನ್ 5(1) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಕೆಳಕಂಡಂತೆ ಅಧಿಕಾರಿಗಳನ್ನು "ಸಾರ್ವಜನಿಕ ಮಾಹಿತಿ ಅಧಿಕಾರಿ" ಹಾಗೂ ಸೆಕ್ಷನ್ 19(1) ರಡಿಯಲ್ಲಿ "ಮೇಲ್ಮನವಿ ಪ್ರಾಧಿಕಾರ" ಎಂದು ನೇಮಕ ಮಾಡಲಾಗಿದೆ.

| ಕ್ರ. ಸಂ. | ಕಛೇರಿ ಮತ್ತು ವಿಳಾಸ | ಸಾರ್ವಜನಿಕ ಮಾಹಿತಿ ಅಧಿಕಾರಿ ಸೆಕ್ಷನ್ 5(1) | ಸಾರ್ವಜನಿಕ ಸಹಾಯಕ ಮಾಹಿತಿ ಅಧಿಕಾರಿ ಸೆಕ್ಷನ್ 5(2) | ಮೇಲ್ಮನವಿ ಪ್ರಾಧಿಕಾರ ಸೆಕ್ಷನ್ 19(1) |
|---|---|---|---|---|
| 1. | ಕಾರ್ಯನಿರ್ವಾಹಕ ಅಭಿಯಂತರು, ಸಣ್ಣ ನೀರಾವರಿ ವಿಭಾಗ, ಕುಷ್ಟಗಿ. | ಶ್ರೀ ಅಣ್ಣಪ್ಪ ಎ.ಕೆ. ಕಾರ್ಯನಿರ್ವಾಹಕ ಅಭಿಯಂತರು, ಸಣ್ಣ ನೀರಾವರಿ ವಿಭಾಗ, ಕುಷ್ಟಗಿ. | ಶ್ರೀ ಎಂ.ಐ. ಮುಧೋಳ ತಾಂತ್ರಿಕ ಸಹಾಯಕರು, ಕಾರ್ಯನಿರ್ವಾಹಕ ಅಭಿಯಂತರವರ ಕಛೇರಿ ಸಣ್ಣ ನೀರಾವರಿ ವಿಭಾಗ, ಕುಷ್ಟಗಿ | ಅಧೀಕ್ಷಕ ಅಭಿಯಂತರರು, ಸಣ್ಣ ನೀರಾವರಿ ವೃತ್ತ, ಗುಲ್ಬರ್ಗಾ. |

**ಅಣ್ಣಪ್ಪ ಎ.ಕೆ.**

ಪಿ.ಆರ್.28 ಕಾರ್ಯನಿರ್ವಾಹಕ ಅಭಿಯಂತರು,

ಸಣ್ಣ ನೀರಾವರಿ ವಿಭಾಗ, ಕುಷ್ಟಗಿ.

## COMMERCIAL TAXES DEPARTMENT

### PROCEEDINGS OF THE COMMISSIONER OF COMMERCIAL TAXES, (KARNATAKA), BANGALORE-CLARIFICATION UNDER SECTION 59(4) OF THE KARNATAKA VALUE ADDED TAX ACT, 2003

**Sub:** KVAT Act, 2003-Clarification under Section 59(4) regarding the rate of tax applicable on 'galvanized spring steel covered with plastic sleeves'.

**Ref:** Application Dated:22.10.2008 of Sri Raj Kumar Neeraj, Proprietor, M/s Green House Solutions, No.13, Victorian Meadows, Behind Bageecha Restaurant, Airport, Varthur Road, Bangalore-560 037.

In its application cited above, Sri Raj Kumar Neeraj, Proprietor, M/s Green House Solutions, No.13, Victorian Meadows, Behind Bageecha Restaurant, Airport, Varthur Road, Bangalore-560 037 has sought clarification regarding the rate of tax applicable on 'galvanized spring steel covered with plastic sleeves'.

2. Section 59(4) of the Karnataka Value Added Tax Act, 2003 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purpose of maintaining uniformity in the work of assessments and collection of revenue. It is examined and found that the clarification requested by the petitioner is within the scope of the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

3. Hence the following clarification is issued.

**Clarification No.CLR.CR.190/08-09, Dated:8th December, 2008**

It is hereby clarified that 'galvanized spring steel covered with plastic sleeves' are taxable at 12.5% under Section 4(1) (b) of the KVAT Act, 2003.

**B.A. HARISH GOWDA**

PR-29

Commissioner of Commercial Taxes,
(Karnataka), Bangalore.

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ: ಎಸ್‌ಡಿಕೆ/690/ ಡಿಟಿಸಿಆರ್/2005–06, ದಿನಾಂಕ:29ನೇ ನವೆಂಬರ್, 2008**

**ಉಪಸ್ಥಿತರು:** ನೂರ್‌ಮಹಮ್ಮದ್ ಹುಸೇನ್
ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಫಿರ್ಯಾದುದಾರರು:**
ಪೊಲೀಸ್ ಉಪ ನಿರೀಕ್ಷಕರು, ಸುಳ್ಯ ಪೊಲೀಸ್ ಠಾಣೆ, ಸುಳ್ಯ.

**ಆರೋಪಿಗಳು:**
1) ಕೆ.ಜಿ. ಅನಿಲ್ ಕುಮಾರ್ (30 ವರ್ಷ) ಬಿನ್ ಗೋಪಿ ವಾಸ: ಕೋಟೆಪದವಿ ಮನೆ, ಬಂದಡ್ಕ ಗ್ರಾಮ, ಕಾಸರಗೋಡು ಕೇರಳ ರಾಜ್ಯ.
2) ಪಿ. ಸುರೇಶ, (29 ವರ್ಷ) ಬಿನ್ ಪಕೀರ ಬೆಳ್ಚಪಾಡ, ವಾಸ: ಪಳ್ಳಕಾಡು ಮನೆ, ಕರಿವೇಡಗ ಗ್ರಾಮ, ಕಾಸರಗೋಡು, ಕೇರಳಾ ರಾಜ್ಯ.

**ವಾಹನದ ಮಾಲೀಕರು (ಅರ್ಜಿದಾರರು)**
ಕೆ.ಜಿ. ಅನಿಲ್ ಕುಮಾರ್ (30 ವರ್ಷ) ಬಿನ್ ಗೋಪಿ ವಾಸ: ಕೋಟೆಪದವಿ ಮನೆ, ಬಂದಡ್ಕ ಗ್ರಾಮ, ಕಾಸರಗೋಡು ಕೇರಳ ರಾಜ್ಯ.

**ಪ್ರಕರಣದ ಮುಖ್ಯಾಂಶಗಳು:**

ಪೊಲೀಸ್ ಉಪ ನಿರೀಕ್ಷಕರು, ಸುಳ್ಯ ಪೊಲೀಸ್ ಠಾಣೆ, ಸುಳ್ಯ ಇವರು ದಿನಾಂಕ:14.06.2006ರಂದು ದೊರೆತ ಖಚಿತ ವರ್ತಮಾನದ ಮೇರೆಗೆ ಸಂಜೆ ಸುಮಾರು 6–00 ಗಂಟೆಯ ಸಮಯಕ್ಕೆ ತಮ್ಮ ಸಿಬ್ಬಂದಿಯವರೊಂದಿಗೆ ಸುಳ್ಯ ತಾಲ್ಲೂಕು ಕಸಬಾ ಗ್ರಾಮದ ಸುಳ್ಯ ಮುಖ್ಯ ರಸ್ತೆಯಲ್ಲಿ ಹೊಂಚು ಹಾಕಿ ಕಾಯುತ್ತಿರುವ ಸಂದರ್ಭದಲ್ಲಿ ಜಟ್ಟಿಪಳ್ಳ ಕಡೆಯಿಂದ ಸುಳ್ಯ ಪೇಟೆ ಕಡೆಗೆ ಜೀಪೊಂದು ಅತೀವೇಗವಾಗಿ ಚಲಾಯಿಸಿಕೊಂಡು ಬರುತ್ತಿರುವುದನ್ನು ಕಂಡು ಸಂಶಯದ ಮೇರೆಗೆ ನಿಲ್ಲಿಸಲು ಸೂಚನೆ ನೀಡಿದಾಗ ಸದರಿ ಜೀಪನ್ನು ಅದರ ಚಾಲಕ ನಿಲ್ಲಿಸಿ ಪರಾರಿಯಾಗಲು ಪ್ರಯತ್ನಿಸಿದ್ದು, ಸಿಬ್ಬಂದಿಯವರ ಸಹಾಯದಿಂದ ಹಿಡಿದು ಪ್ರಶ್ನಿಸಿದಾಗ ಸಾರಾಯಿ ಸ್ಯಾಚೇಟುಗಳನ್ನು ಹೊಂದಿ ಕೇರಳ ರಾಜ್ಯಕ್ಕೆ ಸಾಗಾಣಿಕೆ ಮಾಡುತ್ತಿರುವುದೆಂದು ಜೀಪಿನಲ್ಲಿದ್ದ ಚಾಲಕ

ಹಾಗೂ ಸಹ ಚಾಲಕ ತಿಳಿಸಿರುತ್ತಾರೆ. ನಂತರ ಅವರಿಬ್ಬರ ಹೆಸರು ಮತ್ತು ವಿಳಾಸವನ್ನು ವಿಚಾರಿಸಿದಾಗ ಕೆ.ಜಿ. ಅನಿಲ್‌ಕುಮಾರ್, (30 ವರ್ಷ) ಬಿನ್ ಗೋಪಿ, ವಾಸ: ಕೋಟೆಪದವಿ ಮನೆ, ಬಂದಡ್ಕ ಗ್ರಾಮ, ಕಾಸರಗೋಡು, ಕೇರಳ ರಾಜ್ಯ, ಮತ್ತು ಪಿ. ಸುರೇಶ, (29 ವರ್ಷ) ಬಿನ್ ಪಕೀರ ಬೆಳ್ಚಪಾಡ, ವಾಸ: ಪಳ್ಳಕಾಡು ಮನೆ, ಕರಿವೇಡಗ ಗ್ರಾಮ, ಕಾಸರಗೋಡು, ಕೇರಳಾ ರಾಜ್ಯ ಎಂದು ತಿಳಿಸಿರುತ್ತಾನೆ. ಸಾರಾಯಿ ಸ್ಯಾಚೇಟುಗಳನ್ನು ಸಾಗಾಣಿಕೆ ಮಾಡುತ್ತಿದ್ದ ಜೀಪು ಸಂಖ್ಯೆ: ಕೆಎಲ್–13ಸಿ–7346 ನೋಂದಾಣಿ ಸಂಖ್ಯೆಯಾಗಿದ್ದು, ಸಾರಾಯಿ ಸ್ಯಾಚೇಟುಗಳನ್ನು ಸಾಗಾಣಿಕೆ ಮಾಡಲು ಪರವಾನಿಗೆ ಇದೆಯೇ ಎಂದು ಚಾಲಕ ಹಾಗೂ ಸಹಾ ಚಾಲಕರಲ್ಲಿ ವಿಚಾರಿಸಿದಾಗ ತನ್ನ ಬಳಿ ಯಾವುದೇ ಪರವಾನಿಗೆ ಇರುವುದಿಲ್ಲವೆಂದು ತಿಳಿಸಿರುತ್ತಾರೆ. ನಂತರ ಪಂಚರ ಸಮಕ್ಷಮ ಸಾರಾಯಿ ಸ್ಯಾಚೇಟುಗಳನ್ನು ಪರಿಶೀಲಿಸಿದಾಗ ಒಂದು ಪಾಲಿಥೀನ್ ಚೀಲದಲ್ಲಿ 100 ಎಂಎಲ್‌ನ 300 ಸಾರಾಯಿ ಸ್ಯಾಚೇಟುಗಳ 10 ಮೂಟೆಗಳಲ್ಲಿ ಒಟ್ಟು 3,000 ಸಾರಾಯಿ ಸ್ಯಾಚೇಟುಗಳು ಇರುವುದು ಕಂಡು ಬಂತು. ಸದರಿ ಸಾರಾಯಿ ಸ್ಯಾಚೇಟುಗಳಿಂದ ಸ್ಯಾಂಪಲ್‌ಗಾಗಿ ತಲಾ ಎರಡರಂತೆ ಪ್ರತ್ಯೇಕವಾಗಿ ತೆಗೆದು ಬಿಳಿ ಬಟ್ಟೆಯಿಂದ ಸುತ್ತಿ ಅರಗಿನಿಂದ ಸೀಲು ಮಾಡಿ ಪಂಚರ ಸಹಿ ಇರುವ ಚೀಟಿಯನ್ನು ಅಂಟಿಸಲಾಯಿತು. ಸಾಗಾಣಿಕೆಗೆ ಬಳಸಿದ ಜೀಪನ್ನು ಪರಿಶೀಲಿಸಲಾಗಿ ಅದರ ಇಂಜಿನ್ ನಂ.DV200922SL 525563 ಮತ್ತು ಚಾಸೀಸ್ ನಂ. CL500MD-4-BV-DV 200922 ಆಗಿರುತ್ತದೆ. ಸಾರಾಯಿ ಸ್ಯಾಚೇಟುಗಳನ್ನು ಅಕ್ರಮವಾಗಿ ಯಾವುದೇ ಪರವಾನಿಗೆ ಇಲ್ಲದೇ ಕೇರಳ ರಾಜ್ಯಕ್ಕೆ ಸಾಗಾಣಿಕೆ ಮಾಡುತ್ತಿರುವುದು ಹಾಗೂ ಇದು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 12, 32, 34 ಮತ್ತು 43ಎ ರಂತೆ ಅಪರಾಧ ಹಾಗೂ ಶಿಕ್ಷಾರ್ಹವಾಗಿರುವುದರಿಂದ, ಸಾರಾಯಿ ಮತ್ತು ಸಾಗಾಣಿಕೆಗೆ ಬಳಸಿದ ಜೀಪು ಸಂಖ್ಯೆ: ಕೆಎಲ್–13ಸಿ–7346ನ್ನು ವಶಪಡಿಸಿಕೊಂಡು, ಮಹಜರನ್ನು ಸ್ಥಳದಲ್ಲಿಯೇ ತಯಾರಿಸಿ ಆರೋಪಿಗಳ ವಿರುದ್ಧ ಪ್ರಥಮ ಮಾಹಿತಿ ವರದಿ ಸಂಖ್ಯೆ:31/2006, ದಿನಾಂಕ:14.06.2006ರಂದು ಮೊಕದ್ದಮೆಯಲ್ಲಿ ದಾಖಲಿಸಿಕೊಂಡು ಪ್ರಥಮ ಮಾಹಿತಿ ವರದಿಯನ್ನು ಮಾನ್ಯ ನ್ಯಾಯಾಲಯಕ್ಕೆ ಸಲ್ಲಿಸಿ ನಕಲು ಮತ್ತು ಸೊತ್ತು ಪಟ್ಟಿಯೊಂದಿಗೆ ಪ್ರಾಧಿಕಾರಕ್ಕೆ ಸಲ್ಲಿಸಿ, ಈ ಪ್ರಾಧಿಕಾರದ ಆದೇಶ ದಿನಾಂಕ:21.06.2006 ರ ಅನುಸಾರ ವಶಪಡಿಸಿಕೊಂಡ ಸೊತ್ತುಗಳನ್ನು ಹಾಗೂ ವಾಹನವನ್ನು ಮುಂದಿನ ಸೂಕ್ತ ಕ್ರಮಕ್ಕಾಗಿ ದಿನಾಂಕ:27.06.2006ರಂದು ಅಬಕಾರಿ ಉಪ ನಿರೀಕ್ಷಕರು (1), ಜಾರಿ ಮತ್ತು ತನಿಖೆ, ಸುಳ್ಯ ಇವರಿಗೆ ಹಸ್ತಾಂತರಿಸಿರುತ್ತಾರೆ.

ತನಿಖೆಯನ್ನು ಕೈಗೊಂಡ ಅಬಕಾರಿ ಉಪ ನಿರೀಕ್ಷಕರು (1), ಜಾರಿ ಮತ್ತು ತನಿಖೆ, ಸುಳ್ಯ ಇವರ ತನಿಖಾ ವರದಿ ಸಂಖ್ಯೆ: ಸಿಆರ್‌ಎಂ/35/2005–06, ದಿನಾಂಕ:14.08.2006ರ ವರದಿಯಲ್ಲಿ ಸದರಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಸಾರಾಯಿಯ ಸ್ಯಾಂಪಲ್‌ಗಳನ್ನು ರಾಸಾಯನಿಕ ವಿಶ್ಲೇಷಣೆಗೆ ಒಳಪಡಿಸಿದ್ದು, ಸಹಾಯಕ ರಾಸಾಯನಿಕ ವಿಶ್ಲೇಷಣಕರ ಪತ್ರ ಸಂಖ್ಯೆ: ಇ–278–20 ದಿನಾಂಕ:03.08.2006ರಲ್ಲಿ ಸಾರಾಯಿಯ ಮದ್ಯಸಾರ ಪ್ರಮಾಣ 37% ಇರುವುದಾಗಿ ದೃಢೀಕರಣ ಪತ್ರ ನೀಡಿರುವ ಮೇರೆಗೆ ಸಾರಾಯಿಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ನಾಶಪಡಿಸಲು ಆದೇಶ ನೀಡಬೇಕೆಂದು ಶಿಫಾರಸ್ಸು ಮಾಡಿರುವ ಪ್ರಕಾರ ಅಂದಿನ ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ಇಐಬಿ, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರ ನ್ಯಾಯಾಲಯದ ಆದೇಶ ಸಂಖ್ಯೆ: ಇಐಬಿ:ಡಿಟಿಸಿಆರ್:690: 2005–06 ದಿನಾಂಕ:17.01.2007ರಲ್ಲಿ ತಕ್ಷೀರಿನಲ್ಲಿ ವಶಪಡಿಸಿಕೊಂಡ ವಾಹನದ ಮುಟ್ಟುಗೋಲನ್ನು ಕಾಯ್ದಿರಿಸಿ ಉಳಿದ ಸಾರಾಯಿ ಸ್ಯಾಚೇಟುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು, ಮುಟ್ಟುಗೋಲು ಹಾಕಿಕೊಂಡ ಸಾರಾಯಿಯನ್ನು ನಿಯಮ 43ಎ (3)ರನ್ವಯ ಅಬಕಾರಿ ಉಪ ಅಧೀಕ್ಷಕರು, ಪುತ್ತೂರು ಉಪವಿಭಾಗ, ಪುತ್ತೂರು ಇವರ ಸಮಕ್ಷಮ ಸೂಕ್ತಮಹಜರು ಜರುಗಿಸಿ ನಾಶಪಡಿಸಲಾಗಿದೆ.

ತಕ್ಷೀರಿಗೆ ಸಂಬಂಧಿಸಿದ ಆರೋಪಿಗಳಾದ ಕೆ.ಜಿ. ಅನಿಲ್‌ಕುಮಾರ್, (30 ವ) ಬಿನ್: ಗೋಪಿ ವಾಸ: ಕೋಟೆಪದವಿ ಮನೆ, ಬಂದಡ್ಕ ಗ್ರಾಮ, ಕಾಸರಗೋಡು ಕೇರಳ ರಾಜ್ಯ, ಮತ್ತು ಪಿ. ಸುರೇಶ, (29 ವ) ಬಿನ್ ಪಕೀರ ಬೆಳ್ಚಪಾಡ, ವಾಸ: ಪಳ್ಳಕಾಡು ಮನೆ, ಕರಿವೇಡಗ ಗ್ರಾಮ, ಕಾಸರಗೋಡು ಕೇರಳ ರಾಜ್ಯ ಇವರುಗಳಿಗೆ ಅಂದಿನ ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ಇಐಬಿ, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರು ಕರ್ನಾಟಕ ಅಬಕಾರಿ ಕಾಯಿದೆ 1965 ಕಲಂ 43ಬಿ ಪ್ರಕಾರ ತಕ್ಷೀರಿನಲ್ಲಿ ವಶಪಡಿಸಿಕೊಂಡ ಜೀಪು ಸಂಖ್ಯೆ: ಕೆಎಲ್–13ಸಿ–7346ನ್ನು ಏಕೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದೆಂದು ದಿನಾಂಕ:13.12.2006ರಂದು ಕಾರಣ ಕೇಳಿ ನೋಟೀಸುಗಳನ್ನು ನೋಂದಣಿ ಅಂಚೆ ಮೂಲಕ ನೀಡಲಾಗಿದ್ದು, ಸದರಿ ಕಾರಣ ಕೇಳಿ ನೋಟೀಸುಗಳನ್ನು ಆರೋಪಿಗಳು ದಿನಾಂಕ:22.12.2006 ರಂದು ಸ್ವೀಕರಿಸಿ, ಸ್ವೀಕೃತಿ ರಶೀದಿ ಈ ಪ್ರಾಧಿಕಾರಕ್ಕೆ ಬಂದಿರುತ್ತದೆ.

ಒಂದನೇ ಆರೋಪಿಯಾದ ಶ್ರೀ ಕೆ.ಜಿ. ಅನಿಲ್ ಕುಮಾರ್ ಇವರು ತಕ್ಷೀರಿಗೆ ಸಂಬಂಧಿಸಿದ ಜೀಪು ಸಂಖ್ಯೆ: ಕೆಎಲ್–13ಸಿ–7346ರ ಆರ್.ಸಿ. ಮಾಲೀಕರೆಂದು ಹಾಗೂ ದಿನಾಂಕ:13.12.2006ರಂದು ಈ ಪ್ರಾಧಿಕಾರದಿಂದ ನೀಡಿದ ಕಾರಣ ಕೇಳಿ ನೋಟೀಸಿಗೆ ಲಿಖಿತ ಉತ್ತರವನ್ನು ತಮ್ಮ ವಕೀಲರ ಮುಖಾಂತರ ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ. ತಾನು ದಿನಾಂಕ:13.06.2006ರಂದು ಕೇರಳ ರಾಜ್ಯದ ಪಂಜಿಕಲ್ಲು ಎಂಬಲ್ಲಿ ತನ್ನ ಜೀಪು ಸಂಖ್ಯೆ: ಕೆಎಲ್–13ಸಿ–7346 ರಲ್ಲಿ ತನ್ನ ಸಂಗಡಿಗರೊಂದಿಗೆ ಪಕ್ಕದ ಹೋಟೆಲ್‌ನಲ್ಲಿ ಚಹಾ ಕುಡಿಯುತ್ತಿರುವ ಸಂದರ್ಭದಲ್ಲಿ ಸುಳ್ಯ ಪೊಲೀಸ್ ಠಾಣೆಯ ಪೊಲೀಸ್ ಉಪ ನಿರೀಕ್ಷಕರು ಸದರಿ ಸ್ಥಳಕ್ಕೆ ಬಂದು ತನ್ನನ್ನು ಹಾಗೂ ತನ್ನ ಸಂಗಡಿಗನಾದ ಪಿ. ಸುರೇಶ್‌ರವರನ್ನು ಠಾಣೆಗೆ ಬರಲೆಂದು ಅವರ ಇಲಾಖಾ ಜೀಪಿನಲ್ಲಿ ಕುಳ್ಳಿರಿಸಿ ಕರೆದುಕೊಂಡು ಹೋಗಿರುತ್ತಾರೆ. ತಾನು ಹಿಂದೆ ತನ್ನ ಸ್ವಂತ ಉಪಯೋಗಕ್ಕಾಗಿ ಒಂದು

ಎತ್ತಿನ ಕರುವನ್ನು ಸುಳ್ಯ ತಾಲ್ಲೂಕಿನ ದೊಡ್ಡ ತೋಟದಿಂದ ತೆಗೆದುಕೊಂಡು ಹೋಗುತ್ತಿರುವ ಸಂದರ್ಭದಲ್ಲಿ ತನ್ನನ್ನು ಥಳಿಸಿ ತನ್ನ ಮೇಲೆ ಗೋಹತ್ಯೆ ನಿಷೇಧ ಕಾನೂನಿನಡಿಯಲ್ಲಿ ಮೊಕದ್ದಮೆ ದಾಖಲಿಸಿಕೊಂಡು ಜೀಪನ್ನು ವಶಪಡಿಸಿಕೊಂಡಿರುತ್ತಾರೆ. ನಂತರ ಮಾನ್ಯ ನ್ಯಾಯಾಲಯದ ಆದೇಶದ ಮೇರೆಗೆ ಸದರಿ ಜೀಪನ್ನು ಬಿಡುಗಡೆಗೊಳಿಸಿರುತ್ತಾರೆ. ಅದು ಮಾತ್ರವಲ್ಲದೇ ಅದಕ್ಕಿಂತ ಹಿಂದೆ ತನ್ನನ್ನು ಹಾಗೂ ತನ್ನ ಜೀಪನ್ನು ಕೇರಳ ರಾಜ್ಯದ ಗಡಿ ಭಾಗವಾದ ಕಳ್ಳಬಳ್ಳಿಯಿಂದ ಹಿಡಿದುಕೊಂಡು ತನ್ನ ವಾಹನದಲ್ಲಿ ಯಾವುದೇ ದಾಖಲಾತಿಗಳನ್ನು ಹಾಜರುಪಡಿಸಿಲ್ಲವೆಂಬ ಕಾರಣಕ್ಕೆ ಸುಳ್ಳು ಮೊಕದ್ದಮೆಯನ್ನು ದಾಖಲಿಸಿಕೊಂಡಿರುತ್ತಾರೆ. ಈ ಬಗ್ಗೆ ಸುಳ್ಯ ಠಾಣಾಧಿಕಾರಿಯವರಲ್ಲಿ ತಕರಾರು ಮಾಡಿದ್ದು, ಇದರಿಂದ ಕುಪಿತಗೊಂಡ ಪೊಲೀಸು ಉಪ ನಿರೀಕ್ಷಕರು ತನ್ನನ್ನು ಕರ್ನಾಟಕ ರಾಜ್ಯದ ಗಡಿ ಭಾಗದಲ್ಲಿ ಎಲ್ಲಿಯಾದರೂ ಕಂಡರೇ ತನ್ನ ಮೇಲೆ ಮೊಕದ್ದಮೆ ಮಾಡದೇ ಬಿಡುವುದಿಲ್ಲವೆಂದು ಶಪಥ ಮಾಡಿರುತ್ತಾರೆ. ತನ್ನ ಪೂರ್ವ ದ್ವೇಷದಿಂದ ತನ್ನ ಮೇಲೆ ಸುಳ್ಳು ಮೊಕದ್ದಮೆಯನ್ನು ದಾಖಲಿಸಿ ತನ್ನ ವಿರುದ್ಧ ಹಾಗೂ ಸಂಗಡಿಗರ ವಿರುದ್ಧ ಮೊಕದ್ದಮೆ ದಾಖಲಿಸಿ ತನ್ನ ಜೀಪಿನಲ್ಲಿ ಅಕ್ರಮವಾಗಿ ಸಾರಾಯಿ ಸಾಗಾಣಿಕೆ ಮಾಡಿರುವ ಬಗ್ಗೆ ಸುಳ್ಳು ಮೊಕದ್ದಮೆ ದಾಖಲಿಸಿರುತ್ತಾರೆ. ತಾನು ಯಾವುದೇ ಅಪರಾಧ ಮಾಡಿರುವುದಿಲ್ಲ ಹಾಗೂ ಸದರಿ ಜೀಪಿಗೆ ಫೈನಾನ್ಸ್‌ನಿಂದ ಸಾಲ ಮಾಡಿ ಚಲಾಯಿಸುತ್ತಿದ್ದು, ಸದರಿ ಜೀಪನ್ನು ತನಗೆ ಬಿಡುಗಡೆಗೊಳಿಸಬೇಕೆಂದು ತನ್ನ ಅರ್ಜಿಯಲ್ಲಿ ಕೇಳಿಕೊಂಡಿರುತ್ತಾರೆ.

ವಾಹನ ಮಾಲೀಕರು ಸಲ್ಲಿಸಿದ ಅರ್ಜಿಯನ್ನು ಸಹಾಯಕ ಅಭಿಯೋಗ ನಿರ್ದೇಶಕರು ಮಂಗಳೂರು ಇವರಿಗೆ ಈ ಪ್ರಾಧಿಕಾರದ ದಿನಾಂಕ:25.04.2007 ರಂದು ತಮ್ಮ ಆಕ್ಷೇಪಣೆಗಳಿದ್ದಲ್ಲಿ ಕೂಡಲೇ ಈ ಪ್ರಾಧಿಕಾರಕ್ಕೆ ವರದಿ ಸಲ್ಲಿಸಲು ಸೂಚಿಸಲಾಗಿತ್ತು. ಈ ಬಗ್ಗೆ ವಾಹನವನ್ನು ಬಿಡುಗಡೆಗೊಳಿಸಿದಲ್ಲಿ ಪುನಹಃ ಇಂತಹ ದಂಧೆಗೆ ಉಪಯೋಗಿಸಲು ಸಾಧ್ಯತೆವಿರುವುದಾಗಿ ತಮ್ಮ ಆಕ್ಷೇಪಣೆ ನೀಡಿರುತ್ತಾರೆ.

ವಾಹನದ ಮೌಲ್ಯವನ್ನು ನಿರ್ಧರಿಸುವ ಬಗ್ಗೆ ಪ್ರಾದೇಶಿಕ ಸಾರಿಗೆ ಅಧಿಕಾರಿ, ಪುತ್ತೂರು ಇವರಿಗೆ ಪತ್ರ ಬರೆಯಲಾಗಿದ್ದು, ಅವರು ದಿನಾಂಕ:13.04.2007ರಲ್ಲಿ ವಾಹನದ ಇಂದಿನ ಮೌಲ್ಯ ರೂ.1,28,000/–ಗಳಾಗಬಹುದೆಂದು ದೃಢೀಕರಣ ಪತ್ರ ನೀಡಿರುತ್ತಾರೆ.

ನಂತರ ತಕ್ಷೀರಿನಲ್ಲಿ ವಶಪಡಿಸಿಕೊಂಡ ಜೀಪು ಸಂಖ್ಯೆ: ಕೆಎಲ್–13ಸಿ–7346ನ್ನು ತಾತ್ಕಾಲಿಕ ನೆಲೆಯಲ್ಲಿ ಬಿಡುಗಡೆಗೊಳಿಸುವ ವಿಚಾರಣೆಯನ್ನು ಕೈಗೊಂಡು ಅರ್ಜಿದಾರರಿಗೆ ಹಾಗೂ ಅವರ ಪರ ವಕೀಲರಿಗೆ ನೋಟೀಸನ್ನು ನೀಡಲಾಗಿದ್ದು, ಅಂದಿನ ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ಇಐಬಿ, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರ ನ್ಯಾಯಾಲಯದಲ್ಲಿ ವಾಹನದ ಮಾಲೀಕರು ಅರ್ಜಿ ಸಲ್ಲಿಸಿ ತಕ್ಷೀರಿನಲ್ಲಿ ವಶಪಡಿಸಿಕೊಂಡ ವಾಹನವು 1996ರ ಮೊಡಲ್ ಆಗಿದ್ದು, ಸದರಿ ಜೀಪು ಸಂಪೂರ್ಣ ದುರಸ್ತಿಯಲ್ಲಿದ್ದು, ಕಡಿಮೆ ಅಂದರೆ 25,000/– ಕ್ಕಿಂತ ಜಾಸ್ತಿ ಬೆಲೆ ಬಾಳಲಾರದು ಎಂದು ತಿಳಿಸಿ, ಮಾನ್ಯ ನ್ಯಾಯಾಲಯವು ರೂ.25,000/–ಗಳಿಗೆ ನಿಗದಿಪಡಿಸಿ ತಾತ್ಕಾಲಿಕ ನೆಲೆಯಲ್ಲಿ ಬಿಡುಗಡೆಗೊಳಿಸಬೇಕೆಂದು ತಮ್ಮ ವಕೀಲರ ಮೂಲಕ ಅರ್ಜಿ ಸಲ್ಲಿಸಿರುತ್ತಾರೆ. ಅಂದಿನ ಪ್ರಾಧಿಕಾರವು ಅರ್ಜಿದಾರರು ಸಲ್ಲಿಸಿದ ಅರ್ಜಿಯನ್ನು ದಿನಾಂಕ:03.10.2007ರಂದು ರದ್ದುಗೊಳಿಸಿ ಆದೇಶಿಸಿರುತ್ತದೆ.

ಅರ್ಜಿದಾರರು ಹಾಗೂ ಅವರ ಪರ ವಕೀಲರು ದಿನಾಂಕ:23.04.2008ರಂದು ಈ ಪ್ರಾಧಿಕಾರಕ್ಕೆ ಅರ್ಜಿಯನ್ನು ಸಲ್ಲಿಸಿ ತಕ್ಷೀರಿಗೆ ಸಂಬಂಧಿಸಿದ ಮೊಕದ್ದಮೆಯ ಬಗ್ಗೆ ಘನ ಸಿವಿಲ್ ನ್ಯಾಯಾಧೀಶರು ಮತ್ತು ಜೆ.ಎಂ.ಎಫ್.ಸಿ. ಸುಳ್ಯ ದಕ್ಷಿಣ ಕನ್ನಡ ಜಿಲ್ಲೆ ಇದರ ನ್ಯಾಯಾಲಯದಲ್ಲಿ ಅಬಕಾರಿ ಉಪ ನಿರೀಕ್ಷಕರು, ಸುಳ್ಯ ಜಾರಿ ಮತ್ತು ತನಿಖೆ ಇವರು ದೋಷಾರೋಪಣಾ ಪಟ್ಟಿಯನ್ನು ಸಲ್ಲಿಸಿದ್ದು, ಘನ ನ್ಯಾಯಾಲಯದ ತೀರ್ಪು ದಿನಾಂಕ:29.02.2008ರಂತೆ ಮೊಕದ್ದಮೆಯು ಖುಲಾಸೆಗೊಂಡಿದ್ದು ಆರೋಪಿಗಳು ದೋಷಾಮುಕ್ತರಾಗಿರುತ್ತಾರೆಂದು ತಿಳಿಸಿರುವ ಮಾನ್ಯ ನ್ಯಾಯಾಲಯದ ಆದೇಶದ ಪ್ರತಿಯನ್ನು ಲಗತ್ತಿಸಿ, ವಶಪಡಿಸಿಕೊಂಡ ವಾಹನವನ್ನು ಬಿಡುಗಡೆಗೊಳಿಸಬೇಕೆಂದು ಕೋರಿರುತ್ತಾರೆ.

ನಂತರ ವಿಚಾರಣೆಯನ್ನು ಪ್ರಾರಂಭಿಸಿ ಸರ್ಕಾರದ ಪರ ಸಾಕ್ಷಿಗಳನ್ನು ವಿಚಾರಣೆಗೆ ಒಳಪಡಿಸಿ ಸಾಕ್ಷಿಗಳ ಹೇಳಿಕೆಯನ್ನು ಪಡೆಯಲಾಗಿರುತ್ತದೆ. ಹಾಗೂ ವಾಹನದ ಮಾಲೀಕರ ಪ್ರತಿರಕ್ಷೆ ಸಾಕ್ಷಿ ಹೇಳಿಕೆಯನ್ನು ನಡೆಸಲಾಗಿರುತ್ತದೆ.

ಈ ಪ್ರಕರಣದಲ್ಲಿ ಸರ್ಕಾರದ ಅಭಿಯೋಜನ ಪರ ಸಲ್ಲಿಸಿರುವ ಸಾಕ್ಷ್ಯಾಧಾರಗಳಿಂದ ಈ ಕೆಳಗಿನ ವಿವಾದಾಂಶಗಳನ್ನು ತೀರ್ಮಾನಿಸುವುದು ಅಗತ್ಯವಾಗಿದ್ದು ಪರಿಶೀಲನಾಂಶಗಳು ಈ ಕೆಳಗಿನಂತಿರುತ್ತದೆ.

1) ದಿನಾಂಕ:14.06.2006ರಂದು ಜೀಪು ಸಂಖ್ಯೆ: ಕೆಎಲ್–13ಸಿ–7346ರಲ್ಲಿ ಅಕ್ರಮವಾಗಿ ಯಾವುದೇ ರಹದಾರಿ ಪತ್ರವಿಲ್ಲದೆ ಸಾರಾಯಿ ಸಾಗಾಣಿಕೆ ಮಾಡಲಾಗಿದೆಯೇ?

2) ವಶಪಡಿಸಿಕೊಂಡಿರುವ ವಾಹನ ಮಾಲೀಕ ತಾನೆಂದು ತನಗೆ ತಿಳಿಯದೇ ಅಕ್ರಮ ಸಾರಾಯಿ ಸಾಗಾಣಿಕೆಗೆ ವಾಹನವನ್ನು ಉಪಯೋಗಿಸಲ್ಪಟ್ಟಿತ್ತು ಎಂಬುದನ್ನು ವಾಹನದ ಮಾಲೀಕರು ಸಾಬೀತುಪಡಿಸಿದ್ದಾರೆಯೇ?

3) ಜಪ್ತು ಪಡಿಸಲಾಗಿರುವ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದೇ?

ಒಂದನೇ ಅಂಶವನ್ನು ಗುಣಾತ್ಮಕವಾಗಿ, ಎರಡನೇ ಅಂಶವನ್ನು ನಕರಾತ್ಮಕವಾಗಿ ಮತ್ತು ಮೂರನೇ ಅಂಶವನ್ನು ಅಂತಿಮ ಆದೇಶದಂತೆ.

**ಪ್ರಾ.ಸ–1:**

ಶ್ರೀ ಕೃಷ್ಣ ನಾಯಕ್, ಅಬಕಾರಿ ಉಪ ನಿರೀಕ್ಷಕರು (1) ಜಾರಿ ಮತ್ತು ತನಿಖೆ, ಸುಳ್ಯ ಇವರು ದಿನಾಂಕ:25.06.2008ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಇವರು ಪ್ರಕರಣದ ತನಿಖಾಧಿಕಾರಿ ಆಗಿ ತಮ್ಮ ಸಾಕ್ಷಿಯನ್ನು ನೀಡಿರುತ್ತಾರೆ. ತಾನು ದಿನಾಂಕ:09.06.2006 ರಿಂದ ಸುಳ್ಯ ತಾಲ್ಲೂಕಿನ ಅಬಕಾರಿ ಉಪ ನಿರೀಕ್ಷಕನಾಗಿ ಸೇವೆ ಸಲ್ಲಿಸಿರುತ್ತೇನೆ. ತಾನು ದಿನಾಂಕ:27.06.2006ರಂದು ಮೊಕದ್ದಮೆಗೆ ಸಂಬಂಧಪಟ್ಟ ಸೊತ್ತುಗಳನ್ನು ಹಾಗೂ ದಾಖಲಾತಿಗಳನ್ನು ಸುಳ್ಯ ಪೊಲೀಸ್ ಠಾಣೆಯ ಪೊಲೀಸ್ ಉಪ ನಿರೀಕ್ಷಕರಿಂದ ಪಡೆದುಕೊಂಡಿರುತ್ತೇನೆ. ಪಡೆದುಕೊಂಡ ದಾಖಲಾತಿಗಳಲ್ಲಿ ಪ್ರಥಮ ಮಾಹಿತಿ ವರದಿಯನ್ನು ನಿಶಾನೆ ಪಿ–1 ಎಂದು, ಮಹಜರು ಪ್ರತಿಯನ್ನು ನಿಶಾನೆ ಪಿ–2 ಎಂದು, ಸೊತ್ತುಗಳ ವರದಿಯನ್ನು ನಿಶಾನೆ ಪಿ–3 ಹಾಗೂ ಈ ಪ್ರಾಧಿಕಾರದ ದಿನಾಂಕ:29.06.2006ರಂದು ಸಲ್ಲಿಸಿದ ವರದಿಯನ್ನು ನಿಶಾನೆ ಪಿ–4 ಎಂದು ಗುರುತಿಸಿರುತ್ತೇನೆ. ಸಾರಾಯಿ ಸ್ಯಾಚೇಟುಗಳ ಸ್ಯಾಂಪಲ್‌ಗಳನ್ನು ಅಬಕಾರಿ ರಕ್ಷಕರಾದ ಶ್ರೀ ಮಹಾಲಿಂಗ ನಾಯ್ಕ್ ಇವರ ಮೂಲಕ ಮಂಗಳೂರು ರಾಸಾಯನಿಕ ವಿಶ್ಲೇಷಕರಿಗೆ ಮಾದರಿ ಮೊಹರಿನಿಂದ ಸಲ್ಲಿಸಿರುತ್ತೇನೆ. ನಂತರ ಅದೇ ರಕ್ಷಕರ ಮೂಲಕ ವಾಪಸ್ಸು ಪಡೆದಿರುತ್ತೇನೆ. ಸೊತ್ತುಗಳ ವಿಲೇವಾರಿ ಬಗ್ಗೆ ಅಂದಿನ ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ಇಐಬಿ, ದಕ್ಷಿಣ ಕನ್ನಡ ಜಿಲ್ಲೆ ರವರಿಗೆ ತನಿಖಾ ವರದಿಯನ್ನು ಸಲ್ಲಿಸಿರುತ್ತೇನೆ. ಸದರಿ ವರದಿಯನ್ನು ನಿಶಾನೆ ಪಿ–5 ಎಂದು, ಪ್ರಾಧಿಕಾರದ ಆದೇಶ ದಿನಾಂಕ:17.01.2007ರಂದು ನಿಶಾನೆ ಪಿ–6 ಎಂದು, ಅಬಕಾರಿ ಉಪ ಅಧೀಕ್ಷಕರು, ಪುತ್ತೂರು ಉಪವಿಭಾಗ ಇವರ ಸಮಕ್ಷಮ ಸಾರಾಯಿ ಸ್ಯಾಚೇಟುಗಳನ್ನು ಮಹಜರು ಜರುಗಿಸಿ ನಾಶಪಡಿಸಲಾಗಿದೆ ಇದನ್ನು ನಿಶಾನೆ ಪಿ–7 ಎಂದು ಗುರುತಿಸಲಾಯಿತು. ಮೊಕದ್ದಮೆಯ ದೋಷಾರೋಪಣಾ ಪಟ್ಟಿಯನ್ನು ದಿನಾಂಕ:26.05.2007ರಂದು ವಾಹನ ಮಾಲೀಕರಾದ ಶ್ರೀ ಕೆ.ಜಿ. ಅನಿಲ್‌ಕುಮಾರ್ ಹಾಗೂ ಶ್ರೀ ಪಿ. ಸುರೇಶ ಇವರ ವಿರುದ್ಧ ಮಾನ್ಯ ಜೆ.ಎಂ.ಎಫ್.ಸಿ. ಸುಳ್ಯ ನ್ಯಾಯಾಲಯದಲ್ಲಿ ಸಲ್ಲಿಸಿರುತ್ತೇನೆ. ಪಾಟೀ ಸವಾಲಿಗೆ ಉತ್ತರಿಸುತ್ತಾ ತಾನು ಪೊಲೀಸ್ ಠಾಣೆಯ ಸಿಬ್ಬಂದಿಯವರಿಂದ ಪಡೆದುಕೊಂಡಿರುವ ಸೊತ್ತುಗಳನ್ನು ದಿನಾಂಕ:27.06.2007ರಂದು ಸ್ವೀಕರಿಸಿದ್ದು, ಸ್ವೀಕರಿಸಿದ ಸರಿಯಾದ ಸಮಯ ಎಷ್ಟು ಎಂದು ತನಗೆ ತಿಳಿದಿರುವುದಿಲ್ಲ. ತಕ್ಷೀರು ನಡೆದ ಸಂದರ್ಭದಲ್ಲಿ ತಾನು ಘಟನಾ ಸ್ಥಳದಲ್ಲಿ ಹಾಜರಾಗಿರುವುದಿಲ್ಲ, ಸದರಿ ಆರೋಪಿಗಳನ್ನು ಗುರುತಿಸಲು ಸಾಧ್ಯವಾಗಿರುವುದಿಲ್ಲ, ಇದೇ ವಿಷಯವನ್ನು ತಾನು ಕೋರ್ಟಿನಲ್ಲಿ ಹೇಳಲಿಲ್ಲವೆಂದರೆ ಸರಿಯಲ್ಲ, ಯಾವ ಕಾರಣದಿಂದ ಸುಳ್ಯ ನ್ಯಾಯಾಲಯದಲ್ಲಿ ಪ್ರಕರಣವು ಬಿಟ್ಟುಹೋಯಿತೆಂದರೆ ತನಗೆ ಹೇಳಲು ಸಾಧ್ಯವಿಲ್ಲ, ತಕ್ಷೀರಿಗೆ ಸಂಬಂಧಿಸಿದ ಸಾರಾಯಿ ಸ್ಯಾಚೇಟುಗಳನ್ನು ಎಣಿಸಿ ನೋಡಿಲ್ಲ ಎಂದರೆ ಸರಿ. ಸಾರಾಯಿ ಸ್ಯಾಚೇಟುಗಳನ್ನು ತಾನು ಮಾನ್ಯ ನ್ಯಾಯಾಲಯಕ್ಕೆ ಹಾಜರುಪಡಿಸಿರುವುದಿಲ್ಲ, ಆದರೆ ಅಬಕಾರಿ ಅಧೀಕ್ಷಕರ ಆದೇಶವನ್ನು ಹಾಜರುಪಡಿಸಿರುತ್ತೇನೆ, ಪೊಲೀಸ್‌ನವರು ಜೀಪನ್ನಾಗಲೀ ಸಾರಾಯಿ ಸ್ಯಾಚೇಟುಗಳನ್ನಾಗಲೀ ಸ್ಟೇಷನ್‌ಗೆ ತಂದಿರುವುದಿಲ್ಲ ಅಥವಾ ಸ್ವಾಧೀನ ಪಡಿಸಿರುವುದಿಲ್ಲವೆಂದರೆ ಸರಿಯಲ್ಲ ಎಂದು ಸಾಕ್ಷಿ ನುಡಿದಿರುತ್ತಾರೆ.

**ಪ್ರಾ.ಸ–2:**

ಶ್ರೀ ಹೆಚ್. ಶಿವಪ್ರಕಾಶ್, ಪೊಲೀಸ್ ಉಪ ನಿರೀಕ್ಷಕರು, ಉಳ್ಳಾಲ ಪೊಲೀಸ್ ಠಾಣೆ ಉಳ್ಳಾಲ ಇವರು ದಿನಾಂಕ:27.08.2008ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಇವರು ಪ್ರಕರಣದ ಫಿರ್ಯಾದುದಾರರಾಗಿದ್ದು ತಮ್ಮ ಸಾಕ್ಷಿಯನ್ನು ನೀಡಿರುತ್ತಾರೆ. ದಿನಾಂಕ:05.03.2005 ರಿಂದ ಸುಳ್ಯ ಪೊಲೀಸ್ ಠಾಣೆಯಲ್ಲಿ ಪೊಲೀಸ್ ಉಪ ನಿರೀಕ್ಷಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದು, ತಾನು ದಿನಾಂಕ:14.06.2006ರಂದು ತಾನು ಠಾಣೆಯಲ್ಲಿರುವಾಗ ಜೀಪು ಸಂಖ್ಯೆ: ಕೆಎಲ್–13ಸಿ–7346 ಜೀಪಿನಲ್ಲಿ ಸುಳ್ಯದಿಂದ ಕೇರಳ ರಾಜ್ಯಕ್ಕೆ ಅಕ್ರಮವಾಗಿ ಸಾರಾಯಿ ಸಾಗಾಟ ಮಾಡುತ್ತಿರುತ್ತಾರೆಂಬ ದೊರೆತ ಖಚಿತ ವರ್ತಮಾನದ ಮೇರೆಗೆ ತಮ್ಮ ಸಿಬ್ಬಂದಿಯವರೊಂದಿಗೆ ಇಲಾಖಾ ಜೀಪಿನಲ್ಲಿ 5–30 ಗಂಟೆಗೆ ಹೊರಟು 5–45 ಗಂಟೆಗೆ ಜಟ್ಟಿಪಳ್ಳ ಮುಖ್ಯ ರಸ್ತೆಯಲ್ಲಿ ಕಾಯುತ್ತಿರುವ ಸಂದರ್ಭದಲ್ಲಿ ಜಟ್ಟಿಪಳ್ಳ ಕಡೆಯಿಂದ ಸುಳ್ಯ ಕಡೆಗೆ ಜೀಪು ಸಂಖ್ಯೆ: ಕೆಎಲ್–13ಸಿ–7346ನ್ನು ಅತೀ ವೇಗವಾಗಿ ಚಲಾಯಿಸಿಕೊಂಡು ಬರುತ್ತಿರುವುದನ್ನು ಗಮನಿಸಿ, ನಿಲ್ಲಿಸಲು ಸೂಚನೆ ನೀಡಿ, ಸದರಿ ಚಾಲಕ ಹಾಗೂ ಇನ್ನೊಬ್ಬನನ್ನು ಹಿಡಿದು ಜೀಪಿನ ಟಾರ್ಪಾಲನ್ನು ತೆರೆದು ನೋಡಿದಾಗ ಸುಮಾರು 10 ಗೋಣಿಚೀಲಗಳಲ್ಲಿ ಸಾರಾಯಿ ಸ್ಯಾಚೇಟುಗಳನ್ನು ಸಾಗಾಣಿಕೆ ಮಾಡುತ್ತಿರುವುದು, ಈ ಬಗ್ಗೆ ಪರವಾನಿಗೆ ಇದೆಯೇ ಎಂದು ಕೇಳಲಾಗಿ, ಅವುಗಳ ಬಗ್ಗೆ ಪರವಾನಿಗೆ ಇತ್ಯಾದಿ ಇಲ್ಲವೆಂದು, ಸದರಿ ಸಾರಾಯಿ ಸ್ಯಾಚೇಟುಗಳನ್ನು ಕೇರಳ ರಾಜ್ಯಕ್ಕೆ ಸಾಗಾಣಿಕೆ ಮಾಡುತ್ತಿರುವುದನ್ನು ತಿಳಿಸಿ, ಪ್ರತಿ ಗೋಣಿ ಚೀಲದಲ್ಲಿ 300 ಸಾರಾಯಿ ಸ್ಯಾಚೇಟುಗಳಂತೆ ಒಟ್ಟು 3000 ಸಾರಾಯಿ ಸ್ಯಾಚೇಟುಗಳನ್ನು ವಶಪಡಿಸಿಕೊಂಡು ಆರೋಪಿಗಳ ವಿರುದ್ಧ ತಕ್ಷೀರು ಸಂಖ್ಯೆ: 31/2006 ರಂತೆ ಪ್ರಕರಣವನ್ನು ದಾಖಲಿಸಿ ಮಾನ್ಯ ನ್ಯಾಯಾಲಯಕ್ಕೆ ವರದಿ ಸಲ್ಲಿಸಿರುತ್ತೇನೆ. ಅಂದಿನ ಅಬಕಾರಿ ಅಧೀಕ್ಷಕರ ಆದೇಶದ ಮೇರೆಗೆ ಪ್ರಕರಣದ ಸೊತ್ತುಗಳನ್ನು ಹಾಗೂ ಕಡತಗಳನ್ನು ಅಬಕಾರಿ ಇಲಾಖೆಗೆ ಹಸ್ತಾಂತರಿಸಿರುತ್ತೇನೆ ಎಂದು ಸಾಕ್ಷಿ ನುಡಿದಿರುತ್ತಾರೆ. ಅರ್ಜಿದಾರರ ಪಾಟೀ ಸವಾಲಿಗೆ ಉತ್ತರಿಸುತ್ತಾ ಆರೋಪಿಗಳನ್ನು ಸುಳ್ಯ ಕೋರ್ಟಿನಲ್ಲಿ ನಿರ್ಧೋಷಿಗಳೆಂದು ಬಿಡುಗಡೆ ಮಾಡಿರುತ್ತಾರೆ ಎಂದು ತನಗೆ ತಿಳಿದಿಲ್ಲ, ಠಾಣೆಯಿಂದ ತಕ್ಷೀರು ಸ್ಥಳಕ್ಕೆ ಸುಮಾರು $1^1/_2$ ಫರ್ಲಾಂಗು ದೂರವಿದೆ, ಸುಳ್ಯ ನ್ಯಾಯಾಲಯದಲ್ಲಿ ತಾನು ಹೇಳಿದ ಹೇಳಿಕೆಯ ಆಧಾರದಲ್ಲಿಯೇ ಆರೋಪಿಗಳನ್ನು ಬಿಡುಗಡೆ ಮಾಡಿರುತ್ತಾರೆ ಎಂದರೆ ಸರಿಯಲ್ಲ, ವಾಹನವನ್ನು ವಶಪಡಿಸಿಕೊಳ್ಳುವಾಗ

ಸುಮಾರು ಜನ ಸೇರಿರುತ್ತಾರೆ ಎಂದರೆ ಸರಿ, ಮಹಜರನ್ನು ಠಾಣೆಯಲ್ಲಿಯೇ ಬರೆದಿರುತ್ತೇನೆ ಎಂದರೆ ಸರಿಯಲ್ಲ, ಅದೇ ದಿನ 3, 4 ಜೀಪನ್ನು ಅಮಾನತ್ತುಪಡಿಸಿರುತ್ತೇನೆ ಎಂದರೆ ಸರಿಯಲ್ಲ, ತನ್ನ ಕಕ್ಷಿದಾರರ ವಿರುದ್ಧ ಸುಳ್ಳು ಮೊಕದ್ದಮೆ ದಾಖಲಿಸಿರುತ್ತೇನೆ ಎಂದರೆ ಸರಿಯಲ್ಲ, ತಾನು ಹೇಳಿದ ಹೇಳಿಕೆಗಳಿಗೂ ಪ್ರಥಮ ಮಾಹಿತಿಯಲ್ಲಿ ನಮೂದಿಸಿದ ಹೇಳಿಕೆಗಳಿಗೂ ಯಾವುದೇ ಸಂಬಂಧವಿಲ್ಲವೆಂದರೆ ಸರಿಯಲ್ಲ, ಹಳೆಯ ದ್ವೇಷದಿಂದ ಜೀಪಿನ ಮೇಲೆ ಸುಳ್ಳು ಮೊಕದ್ದಮೆ ದಾಖಲಿಸಿದೆ ಎಂದರೆ ಸರಿಯಲ್ಲ ಎಂದು ಸಾಕ್ಷಿ ನುಡಿದಿರುತ್ತಾರೆ.

**ಡಿಡಬ್ಲ್ಯೂ–1:**

ಶ್ರೀ ಕೆ.ಜಿ. ಅನಿಲ್‌ಕುಮಾರ್, ಬಿನ್ ಗೋಪಿ, ಕೋಟೆಪದವಿ ಮನೆ, ಬಂದಡ್ಕ ಗ್ರಾಮ, ಕಾಸರಗೋಡು ತಾಲ್ಲೂಕು ಇವರು ವಾಹನದ ಮಾಲೀಕರಾಗಿದ್ದು, ದಿನಾಂಕ:26.11.2008ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ತಮ್ಮ ರಕ್ಷಣಾ ಸಾಕ್ಷಿಯನ್ನು ನುಡಿದಿರುತ್ತಾರೆ. ಪಂಜಿಕಲ್ಲು ಎಂಬ ಸ್ಥಳದಲ್ಲಿ ಜೀಪನ್ನು ಪೊಲೀಸರು ಹಿಡಿದಿರುತ್ತಾರೆ. ತಾನು ಪಂಜಿಕಲ್ಲು ಎಂಬಲ್ಲಿ ಹೋಟೆಲ್‌ನಲ್ಲಿ ಚಹಾ ಕುಡಿಯಲು ಹೋದಾಗ ವಾಹನವನ್ನು ಪೊಲೀಸರು ಹಿಡಿದಿದ್ದರು. ವಾಹನದಲ್ಲಿ ಯಾವುದೇ ಅಕ್ರಮ ವಸ್ತುಗಳು ಇರಲಿಲ್ಲ. ವಾಹನಕ್ಕೆ ಸಂಬಂಧಿಸಿದ ಆರ್.ಸಿ. ಪುಸ್ತಕವನ್ನು ಹಾಜರು ಪಡಿಸಲು ತಿಳಿಸಿದ್ದು, ಆರ್.ಸಿ. ಪುಸ್ತಕವನ್ನು ನಾಳೆ ತಂದು ಹಾಜರುಪಡಿಸುತ್ತೇನೆಂದು ಹೇಳಿರುತ್ತೇನೆ. ತನ್ನ ವಿರುದ್ಧ ದಾಖಲಿಸಿರುವ ಮೊಕದ್ದಮೆ ಬಗ್ಗೆ ತನಗೆ ಯಾವುದು ತಿಳಿದಿರುವುದಿಲ್ಲ. ತಾನು ನಿರಪರಾಧಿಯಾಗಿದ್ದು, ತಕ್ಷೀರು ನಡೆದ ಸಂದರ್ಭದಲ್ಲಿ ಬಂಧಿಸಿರುವುದಿಲ್ಲ. ಆರ್.ಸಿ. ಪುಸ್ತಕ ಹಾಜರುಪಡಿಸಿ ವಾಹನವನ್ನು ವಾಪಸ್ಸು ಪಡೆಯುವಂತೆ ಪೊಲೀಸ್ ಅಧಿಕಾರಿಯವರು ತನ್ನಲ್ಲಿ ತಿಳಿಸಿ ವಾಹನವನ್ನು ತಮ್ಮೊಂದಿಗೆ ತೆಗೆದುಕೊಂಡು ಹೋಗಿರುತ್ತಾರೆ. ಮರುದಿನ ತಾನು ಸುಳ್ಯ ಪೊಲೀಸ್ ಠಾಣೆಗೆ ಹಾಜರಾಗಿ ವಾಹನದ ಆರ್.ಸಿ. ಪುಸ್ತಕ ಕೊಡಲು ಹೋದಾಗ ಈ ಮೊಕದ್ದಮೆಯಲ್ಲಿ ತಾನು ಆರೋಪಿ ಎಂದು ತಿಳಿಸಿ, ನ್ಯಾಯಾಲಯದಲ್ಲಿ ಹಾಜರಾಗಲು ತಿಳಿಸಿದರು, ಠಾಣೆಗೆ ಹೋಗುವಾಗ ನನ್ನೊಂದಿಗೆ ಕೃಷ್ಣಮೂರ್ತಿ ಎಂಬ ವಕೀಲರನ್ನು ಕರೆದುಕೊಂಡು ಹೋಗಿರುತ್ತೇನೆ. ನಂತರ 6 ತಿಂಗಳು ಕಳೆದ ಮೇಲೆ ಸುಳ್ಯ ಕೋರ್ಟಿನಿಂದ ಕೋರ್ಟಿಗೆ ಹಾಜರಾಗಲು ಸಮನ್ಸ್ ಜಾರಿಯಾದ್ದುದರಿಂದ, ತಾನು ಇನ್ನೊಬ್ಬ ವಕೀಲರ ಮುಖಾಂತರ ಮಾನ್ಯ ನ್ಯಾಯಾಲಯಕ್ಕೆ ಹಾಜರಾಗಿರುತ್ತೇನೆ.

**ಪಾಟೀಸವಾಲು:**

ಅರ್ಜಿದಾರರು ಎ.ಡಿ.ಪಿ.ಯವರ ಪಾಟೀ ಸವಾಲಿಗೆ ಉತ್ತರಿಸುತ್ತಾ ಪಂಜಿಕಲ್ಲು ನಲ್ಲಿ ಚಹಾ ಕುಡಿಯಲು ಹೋದ ಹೋಟಲಿನ ಹೆಸರು ಏನೆಂಬುದು ತನಗೆ ತಿಳಿದಿಲ್ಲ ಎಂದು, ಪೊಲೀಸ್ ಅಧಿಕಾರಿಯವರು ಜೀಪನ್ನು ವಶಕ್ಕೆ ತೆಗೆದುಕೊಂಡು ತನ್ನನ್ನು ಹಾಗೂ ಪಿ. ಸುರೇಶ್ (2ನೇ ಆರೋಪಿ) ರವರನ್ನು ದಸ್ತಗಿರಿ ಮಾಡಿ ಠಾಣೆಗೆ ಕರೆದಿರುವುದು ಎಂದರೆ ಸರಿ, ಜೀಪಿನಲ್ಲಿ ಅಕ್ರಮ ಸಾರಾಯಿ ಸ್ಯಾಚೇಟುಗಳನ್ನು ಸಾಗಿಸುವುದು ಅಪರಾಧವಾದದ್ದು, ನನ್ನನ್ನು ದಸ್ತಗಿರಿ ಮಾಡಲಾಗಿದೆ ಎಂದರೆ ಸರಿಯಲ್ಲ, ಠಾಣೆಯಲ್ಲಿ ಪೊಲೀಸ್ ಉಪ ನಿರೀಕ್ಷಕರು ತನ್ನ ಸಹಿಯನ್ನು ಪಡೆದು ಬಿಡುಗಡೆ ಮಾಡಿರುತ್ತಾರೆ, ಆದರೆ ಯಾವುದೇ ಜಾಮೀನು ನೀಡಿರುವುದಿಲ್ಲ, ಮರುದಿವಸ ಆರ್.ಸಿ. ಪುಸ್ತಕವನ್ನು ಹಾಜರುಪಡಿಸಿರುತ್ತೇನೆ ತನ್ನ ಮೇಲೆ ಸುಳ್ಳು ಮೊಕದ್ದಮೆ ದಾಖಲಿಸಿರುತ್ತಾರೆ ಎಂಬ ಬಗ್ಗೆ ಮೇಲಾಧಿಕಾರಿಯವರಿಗೆ ಯಾವುದೇ ಮನವಿ ಒಪ್ಪಿಸಿರುವುದಿಲ್ಲ, ನನ್ನ ಜೀಪಿನಲ್ಲಿ ನಾನು ಅಕ್ರಮ ಸಾರಾಯಿ ತೊಟ್ಟೆಗಳನ್ನು ಸಾಗಾಟ ಮಾಡುತ್ತಿದ್ದುದರಿಂದ ಪೊಲೀಸರು ಜೀಪನ್ನು ಅಮಾನತ್ತು ಮಾಡಿಕೊಂಡಿದ್ದಾರೆ ಎಂದರೆ ಸರಿಯಲ್ಲ. ಜೀಪನ್ನು ನನ್ನ ಸ್ವಾಧೀನಕ್ಕೆ ಪಡೆಯಲು ಈ ದಿನ ಸುಳ್ಳು ಸಾಕ್ಷಿ ಹೇಳುತ್ತಿದ್ದೇನೆ ಎಂದರೆ ಸರಿಯಲ್ಲ ಎಂದು ಪಾಟೀ ಸವಾಲಿಗೆ ಉತ್ತರ ನೀಡಿರುತ್ತಾರೆ.

ಅರ್ಜಿದಾರರ ಪರ ವಕೀಲರು ಹಾಗೂ ಸರ್ಕಾರದ ಪರ ಎ.ಡಿ.ಪಿ.ರವರು ವಾದಮಂಡನೆಯನ್ನು ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರ ನ್ಯಾಯಾಲಯದಲ್ಲಿ ಆಲಿಸಲಾಯಿತು.

ಈ ಪ್ರಕರಣದ ಫಿರ್ಯಾದುದಾರರು ಪೂರಕವಾಗಿ ನೀಡಿರುವ ಸಾಕ್ಷ್ಯಾಧಾರದ ಮೇಲೆ ಹಾಗೂ ಲಭ್ಯವಿರುವ ದಾಖಲಾತಿಗಳಿಂದ ದಿನಾಂಕ:14.06.2006ರಂದು ಜಪ್ತು ಪಡಿಸಿರುವ ಜೀಪು ಸಂಖ್ಯೆ: ಕೆಎಲ್–13ಸಿ–7346ರಲ್ಲಿ ಅಕ್ರಮವಾಗಿ ಸಾರಾಯಿ ಸಾಗಾಣಿಕೆಯಾಗಿರುವುದು ಸಾಬೀತಾಗಿರುವುದರಿಂದ ಒಂದನೇ ಅಂಶವನ್ನು ಗುಣಾತ್ಮಕವಾಗಿ ಪರಿಗಣಿಸಲಾಗಿದೆ.

ವಾಹನದಲ್ಲಿ ಅಕ್ರಮವಾಗಿ ಸಾರಾಯಿ ಸಾಗಾಣಿಕೆ ಮಾಡಿರುವುದು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ. ಅರ್ಜಿದಾರರು ಸಲ್ಲಿಸಿದ್ದ ಅರ್ಜಿ ಹಾಗೂ ಹೇಳಿಕೆಗಳು ಒಂದಕ್ಕೊಂದು ಪೂರಕವಾಗಿರುವುದಿಲ್ಲ ಈ ಮೇಲಿನ ಕಾರಣಗಳಿಂದ ಎರಡನೇ ಅಂಶವನ್ನು ನಕರಾತ್ಮಕವಾಗಿ ಪರಿಗಣಿಸಿದೆ.

ಅರ್ಜಿದಾರರು ಈ ಪ್ರಾಧಿಕಾರಕ್ಕೆ ಒಪ್ಪಿಸಿರುವ ಘನ ಸಿವಿಲ್ ನ್ಯಾಯಾಧೀಶರು ಹಾಗೂ ಜೆ.ಎಂ.ಎಫ್.ಸಿ. ನ್ಯಾಯಾಲಯ ಇದರ ತೀರ್ಪು ದಿನಾಂಕ:29.02.2008ರಂತೆ ಪ್ರಕರಣದಲ್ಲಿ ಒಳಗೊಂಡಿರುವ ಆರೋಪಿಗಳಾದ 1ನೇ ಆರೋಪಿ ಕೆ.ಜಿ. ಅನಿಲ್‌ಕುಮಾರ್ ಹಾಗೂ ಪಿ. ಸುರೇಶ್ ಇವರುಗಳು ಅಪರಾಧವೆಸಗಿರುವುದು ಸಾಬೀತು ಆಗಿರುವುದಿಲ್ಲ ಎಂದು, ಸದರಿ ಆರೋಪಿಗಳನ್ನು ದೋಷಮುಕ್ತಗೊಳಿಸಿರುತ್ತಾರೆ. ಈ ನಿಟ್ಟಿನಲ್ಲಿ ಮಾನ್ಯ ಉಚ್ಛ ನ್ಯಾಯಾಲಯ, ಕರ್ನಾಟಕ ರಾಜ್ಯ, ಬೆಂಗಳೂರು

ಇವರ ಸಿಆರ್‌ಪಿ ಸಂಖ್ಯೆ:467/2001 ದಿನಾಂಕ:08.09.2003ರ ಆದೇಶದ ಪ್ಯಾರಾ 5 ಮತ್ತು 8ರಂತೆ ಈ ಕೆಳಕಂಡ ಅಭಿಪ್ರಾಯ ವ್ಯಕ್ತವಾಗಿರುತ್ತದೆ.

The learned Section Judge, by relying on a decision in Authorized officer and Deputy Conservator of Forests, Bangalore V. Ramakrishnappa kedarba Urankar, set aside order passed by the Authorized Officer. In that case Confiscation of the Vehicle used for transporting the sandal wood was seized. But, the Vehicle Used for the Commission of an offence was released. The acquittal of accused persons in criminal cases is nothing to do with the order of confiscation of the vehicle passed by the Authorized officer.

Accordingly, the revision petition is allowed, the judgement and the order Dated:01.12.2001 passed by the learned Sessions Judge is hereby set aside and the order Dated:01.09.1997 passed by the authorized Officer is confirmed.

ಸದರಿ ಮಾನ್ಯ ಉಚ್ಚ ನ್ಯಾಯಾಲಯದ ಆದೇಶವನ್ನು ಎತ್ತಿ ಹಿಡಿದು ಮಾನ್ಯ ಉಚ್ಚ ನ್ಯಾಯಾಲಯದ ಆದೇಶದನ್ವಯ ಪ್ರಕರಣದ ಆರೋಪಿಗಳು ದೋಷಮುಕ್ತರಾಗಿದ್ದರೂ ಸಹಾ ಸರ್ಕಾರದ ಕರ್ನಾಟಕ ಅಬಕಾರಿ ಕಾಯಿದೆ ಸೆಕ್ಷನ್ 11, 14/r/w 32, 34 ಮತ್ತು 43ಎ ಗೆ ಸಂಬಂಧಿಸಿ ಪ್ರಾಧಿಕಾರದ ಮುಂದೆ ಇರುವ ಜಪ್ತಾದ ವಾಹನ ಸಂಖ್ಯೆ: ಕೆಎಲ್–13ಸಿ–7346 ಜೀಪು ಇದರಲ್ಲಿ ದಿನಾಂಕ:14.06.2006 ರಂದು ಅಕ್ರಮವಾಗಿ ಸಾರಾಯಿ ಸ್ಯಾಚೇಟುಗಳನ್ನು ಸಾಗಿಸಲಾದ ಸಂದರ್ಭದಲ್ಲಿ ಜಪ್ತಾಗಿರುವುದು ಸಾಭೀತು ಆಗಿರುವುದರಿಂದ ವಾಹನ ಮುಟ್ಟುಗೋಲಿಗೆ ಸಾಕ್ಷ್ಯಾಧಾರಗಳಿಂದ ಯೋಗ್ಯವಾಗಿರುತ್ತದೆ.

ಈ ಮೇಲಿನ ಎಲ್ಲಾ ಕಾರಣಗಳಿಂದ ಹಾಗೂ ಲಭ್ಯವಿರುವ ದಾಖಲಾತಿಗಳಿಂದ ಈ ಪ್ರಕರಣದಲ್ಲಿ ಜಪ್ತು ಪಡಿಸಲಾಗಿರುವ ಜೀಪನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದೇ ಸೂಕ್ತವೆಂದು ಪ್ರಾಧಿಕಾರವು ತೀರ್ಮಾನಿಸಿ ಈ ಪ್ರಕರಣದಲ್ಲಿ ಜಪ್ತುಪಡಿಸಲಾಗಿರುವ ಜೀಪು ಸಂಖ್ಯೆ: ಕೆಎಲ್–13ಸಿ–7346ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

ನೂರ್ ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಕಾಯಿದೆ 1965ನೇ ಕಾಲಂ 43(ಎ) ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ನಿಯಮ 43(ಬಿ) ರಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ, ಪೊಲೀಸ್ ಉಪ ನಿರೀಕ್ಷಕರು, ಸುಳ್ಯ ಪೊಲೀಸ್ ಠಾಣೆ, ಸುಳ್ಯ ಇವರ ತಕ್ಷೀರು ಸಂಖ್ಯೆ:31/2006 ದಿನಾಂಕ:14.06.2006ರಲ್ಲಿ ಜಪ್ತು ಪಡಿಸಿಕೊಂಡಿರುವ ಜೀಪು ಸಂಖ್ಯೆ: ಕೆಎಲ್–13ಸಿ–7346 (ಇಂಜಿನ್ ನಂ.DV200922SL 525563 ಮತ್ತು ಚಾಸೀಸ್ ನಂ. CL500MD-4-BV-DV 200922) ನ್ನು ನಿಯಮ 43ಎ(2) ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ದಿನಾಂಕ:29.11.2008ರಂದು ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿವಸಗಳ ನಂತರ ಜಾರಿಯಲ್ಲಿ ಬರುತ್ತದೆ.

ನೂರ್ ಮಹಮ್ಮದ್ ಹುಸೇನ್,
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್
ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅನುಬಂಧ–I**

**ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ:**

ಪ್ರಾ.ಸಾ–1 : ಶ್ರೀ ಕೃಷ್ಣನಾಯ್ಕ್, ಅಬಕಾರಿ ಉಪ ನಿರೀಕ್ಷಕರು, ಸುಳ್ಯ ಜಾರಿ ಮತ್ತು ತನಿಖೆ, ಸುಳ್ಯ.

ಪ್ರಾ.ಸಾ–2 : ಶ್ರೀ ಹೆಚ್. ಶಿವಪ್ರಕಾಶ್, ಪೊಲೀಸ್ ಉಪ ನಿರೀಕ್ಷಕರು, ಉಳ್ಳಾಲ ಪೊಲೀಸ್ ಠಾಣೆ, ಉಳ್ಳಾಲ.

**ಅನುಬಂಧ–II**

**ಫಿರ್ಯಾದುದಾರರ ಪರ ಮಂಡಿಸಲಾದ ದಾಖಲೆಗಳು:**

ನಿಶಾನೆ ಪಿ–1 : ಪ್ರಥಮ ಮಾಹಿತಿ ವರದಿ

ನಿಶಾನೆ ಪಿ–2 : ಮಹಜರು ಪ್ರತಿ

ನಿಶಾನೆ ಪಿ–3 : ಸೊತ್ತು ಪಟ್ಟಿ

ನಿಶಾನೆ ಪಿ–4 : ಪ್ರಾಧಿಕಾರಕ್ಕೆ ಸಲ್ಲಿಸಿದ ವರದಿ

ನಿಶಾನೆ ಪಿ–5 : ತನಿಖಾ ವರದಿ ದಿನಾಂಕ:14.08.2008

ನಿಶಾನೆ ಪಿ–6 : ಅಧಿಕೃತ ಅಧಿಕಾರಿಗಳ ಆದೇಶ

ನಿಶಾನೆ ಪಿ–7 : ಸೊತ್ತು ನಾಶಪಡಿಸಿದ ಬಗ್ಗೆ ಮಹಜರು.

**ಅನುಬಂಧ–III**

**ವಾಹನ ಮಾಲೀಕರ ಪರವಾಗಿ ವಿಚಾರಣೆ ಮಾಡಲಾದ ಸಾಕ್ಷಿದಾರರು:**

ಡಿಡಬ್ಲ್ಯೂ–1 ಕೆ.ಜಿ. ಅನಿಲ್‌ಕುಮಾರ್ ಬಿನ್ ಗೋಪಿ, ಕೋಟೆಪದವಿ ಮನೆ, ಬಂದಡ್ಕ ಗ್ರಾಮ, ಕಾಸರಗೋಡು ತಾಲ್ಲೂಕು.

**ಅನುಬಂಧ–IV**

**ವಾಹನ ಮಾಲೀಕರ ಪರವಾಗಿ ಗುರುತಿಸಲಾದ ದಾಖಲೆಗಳು: – ಯಾವುದು ಇಲ್ಲ–**

ನೂರ್ ಮಹಮ್ಮದ್ ಹುಸೇನ್,
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್
ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

ಪಿ.ಆರ್.30

**ಕಾರ್ಮಿಕ ಅಧಿಕಾರಿ ವ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪವಿಭಾಗ–1, ವಿಜಾಪುರ ಜಿಲ್ಲೆ, ವಿಜಾಪುರ**

**ಪ್ರಕರಣ ಸಂಖ್ಯೆ: ಡಬ್ಲ್ಯೂಸಿಎ/ಎಸ್‌ಆರ್–193/08, ದಿನಾಂಕ:22ನೇ ಡಿಸೆಂಬರ್, 2008**

**ಅರ್ಜಿದಾರರು:**

1) ಗಣಪತ ಮಾಣಿಕ ಬದರ ಸೌ: ಡೋಬಳೆ ಗಲ್ಲಿ, ವಿಜಾಪುರ.
2) ಸವಿತಾ ಪಾಂಡುರಂಗ ಬದರ ಸೌ: ಡೋಬಳೆ ಗಲ್ಲಿ, ವಿಜಾಪುರ.

**ಪ್ರತಿವಾದಿಗಳು:**

1) ಅರಿಫ ಮೊಹಮ್ಮದ ಶೇಖ, ಲಾರಿ ಮಾಲೀಕರು, ನಂ.ಎಂಹೆಚ್–42–ಬಿ–7613, ಸೌ:ಮವತ, ತಾ:ದೌಂಡ ಜಿ. ಪೂನಾ, ಮಹಾರಾಷ್ಟ್ರ
2) ರಿಲಾಯನ್ಸ್ ಇನ್ಸೂರೆನ್ಸ್ ಕಂ.ಲಿ., ಬೆಂಗಳೂರು.

**ಪ್ರಕಟಣೆ**

ಮೇಲ್ಕಾಣಿಸಿದ ಅರ್ಜಿದಾರರು ಈ ನ್ಯಾಯಾಲಯದಲ್ಲಿ ಅರ್ಜಿಯೊಂದನ್ನು ಸಲ್ಲಿಸಿ, ಶ್ರೀ ಪಾಂಡುರಂಗ ಗಣಪತ ಬದರ ಇವರು ಪ್ರತಿವಾದಿಗಳ ಬಳಿ ಕೆಲಸ ನಿರ್ವಹಿಸುವಾಗ ಮತ್ತು ಕೆಲಸದ ಪರಿಣಾಮದಿಂದಾಗಿ ದಿನಾಂಕ:13.10.2008ರಂದು ಅಪಘಾತಕ್ಕೀಡಾಗಿ ಮೃತನಾಗಿರುತ್ತಾನೆಂದು ಅಲ್ಲದೇ ತಾವು ಮೃತರ ಅವಲಂಬಿತರಾಗಿರುವುದರಿಂದ ಕಾಯ್ದೆಯನ್ವಯ ತಮಗೆ ಬರಬೇಕಾದ ಪರಿಹಾರದ ಹಣವನ್ನು ಪ್ರತಿವಾದಿಗಳಿಂದ ಕೊಡಿಸಿಕೊಡಬೇಕೆಂದು ವಿನಂತಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ, ಹಾಗೂ ಅರ್ಜಿದಾರರಲ್ಲದೇ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೇ, ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ ತಮ್ಮ ಪರ ಆಕ್ಷೇಪಣೆಯಾಗಲೀ ಅಥವಾ ಅರ್ಜಿಯಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸಬೇಕು ಹಾಗೂ ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಮತ್ತು ಅರ್ಜಿಗಳು ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಅರ್ಜಿಗಳನ್ನು ಮತ್ತು ಆಕ್ಷೇಪಣೆಗಳನ್ನು ಸ್ವೀಕರಿಸಲಾಗುವುದಿಲ್ಲ.

ಕಾರ್ಮಿಕ ಅಧಿಕಾರಿ ವ ಕಾರ್ಮಿಕ ನಷ್ಟ ಪರಿಹಾರ
ಆಯುಕ್ತರು, ಉಪವಿಭಾಗ–1, ವಿಜಾಪುರ.

ಪಿ.ಆರ್.32

**PROCEEDINGS OF ASSISTANT COMMISSIONER OF COMMERCIAL TAXES, LOCAL VAT OFFICE-130, BANGALORE, DATED:23RD DECEMBER, 2008**

**Present:** M. Venkataramu, Assistant Commissioner of Commercial Taxes.

**Sub:** Loss of 'C' Forms in case of M/s. Prachi Associates, Bangalore.

**Read:** Letter Dated:24.09.2008 of M/s. Prachi Associates.

**Preamble:**

M/s. Prachi Associates, No.38, Ist Floor, 11th Cross, Vyalikaval, Malleshwaram, Bangalore-560003 is a registered dealer borns on the files of this office bearing TIN No.29660455064. The dealer in his letter cited at read above has intimated that they have been lost two 'C' Forms bearing No. 2914459 & 2914460 issued by the department, is lost in transit.

The dealer has adduced the proof for having filed the complaint to police authorities for loss of above 'C' Forms and executed Indemnity Bond in favour of the Government as laid down under Rule 12(2) and 12(9) of CST Act, 1956.

In the instant case since the 'C' Forms mentioned as above, is stated to be lost in transit, the forms so lost is treated as invalid. Hence this order.

**Order No. ACCT/LVO-130/469/2008-09, Dated:23rd December, 2008**

In view of the circumstances explained as above, the 'C' Form Nos. 2914459 & 2914460 (2 Nos) are treated as invalid with immediate effect.

Assistant Commissioner of Commercial Taxes,
LVO-130, Bangalore.

**PROCEEDINGS OF THE ASSISTANT COMMISSIONER OF COMMERCIAL TAXES, LOCAL VAT OFFICE-130, BANGALORE**

**Notified Authority Under the Rule 6(i) of the CST (Karnataka) Rules,1957**

**NOTIFICATION**

**No. ACCT/LVO-130/08-09, Dated:23rd December, 2008**

By virtue of the provisions of Rule 12(2) of the CST (Registration & Turnover) Rules 1957 and Rule 6(e) and 6(i) of the CST (Karnataka) Rules 1957, it is hereby notified for general information that the declaration in Form-C described below is declared to be obsolete and invalid.

| Sl. No. | Number (including code No.) of declaration Forms Lost destroyed or stolen | Name & address of the dealer to whom declaration Forms is/are issued by the department with date of C form issue | Registration certificate No. of the dealer under CST Act 1956 | The address of the dealer to whom the declaration is/are sent | Date of issue of Form/s by the dealer | Whether Lost/Stolen/ destroyed | Remarks |
|---|---|---|---|---|---|---|---|
| 1. | 'C' Form Nos.<br>1. 2914459 &<br>2. 2914460 | M/s. Prachi Associates, No.38, Ist Floor, 11th Cross, Vyalikaval, Malleshwaram, Bangalore-560003 | TIN No. 29660455064 | M/s. Luxor Writing Instruments Pvt. Ltd., No.229, Okhla Industrial Estate, Phase III, New Delhi-20. | 29.09.2006 | Lost in transit<br>1)<br>2) | Value of the 'C' forms.<br>2,34,131.13<br>1,06,521.00<br>3,40,652,13 |

Assistant Commissioner of Commercial Taxes,
PR-33 LVO-130, Bangalore.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪ ನಿಬಂಧಕರವರು, ದಾವಣಗೆರೆಜಿಲ್ಲೆ, ದಾವಣಗೆರೆ ಇವರ ಕಛೇರಿಯ ನಡವಳಿಗಳು**

**ವಿಷಯ:** ಸಮಾಪನೆಗೊಂಡಿರುವ ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘ ನಿ., ಆಲೂರು, ದಾವಣಗೆರೆ–ತಾ: ಇದರ ನೋಂದಣಿಯನ್ನು ರದ್ದುಪಡಿಸುವ ಕುರಿತು.

**ಉಲ್ಲೇಖ:**1) ಈ ಕಛೇರಿ ಆದೇಶ ಸಂಖ್ಯೆ: ಡಿಆರ್/ಡಿವಿಜಿ/ಸಮಾಪನೆ/ಸಿಆರ್–21/2006–07, ದಿನಾಂಕ:23.08.2006.
2) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರ ಪತ್ರ ದಿನಾಂಕ:29.11.2008.

**ಪ್ರಸ್ತಾವನೆ:**

ಮೇಲ್ಕಂಡ ವಿಷಯ ಮತ್ತು ಉಲ್ಲೇಖಗಳಿಗೆ ಸಂಬಂಧಿಸಿದಂತೆ, ಈ ಮೇಲ್ಕಂಡ ಸಹಕಾರ ಸಂಘವು ನೋಂದಣಿ ಸಂಖ್ಯೆ: ಎಆರ್–31/ಆರ್‌ಜಿಎನ್/29088/ ದಿನಾಂಕ:03.11.2000 ರಲ್ಲಿ ನೋಂದಣಿಯಾಗಿರುತ್ತದೆ. ಸಂಘದ ಕಾರ್ಯಚಟುವಟಿಕೆಗಳು ಪೂರ್ಣವಾಗಿ ಸ್ಥಗಿತಗೊಂಡಿದ್ದರಿಂದ, ಈ ಸಂಘವನ್ನು ಮುಂದುವರಿಸಿಕೊಂಡು ಹೋಗುವುದು

ಸೂಕ್ತವಲ್ಲವೆಂದು ಭಾವಿಸಿ, ಉಲ್ಲೇಖ (1)ರ ದಿನಾಂಕ:23.08.2006ರ ಆದೇಶದಲ್ಲಿ ಸಮಾಪನೆಗೊಳಿಸಿ ಸಹಕಾರ ಸಂಘಗಳ ನಿರೀಕ್ಷಕರು, ಸಹಾಯಕ ನಿಬಂಧಕರ ಕಛೇರಿ, ದಾವಣಗೆರೆ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು. ಸಮಾಪನಾಧಿಕಾರಿಗಳು ಸಂಘದ ಆಸ್ತಿ ಮತ್ತು ಜವಾಬ್ದಾರಿಗಳನ್ನು ವಿಲೇಮಾಡಿ ಶೂನ್ಯಗೊಳಿಸಿ ಸಂಘದ ನೋಂದಣಿಯನ್ನು ರದ್ದುಗೊಳಿಸಲು ಉಲ್ಲೇಖ (2)ರ ರೀತ್ಯ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರ ಮುಖಾಂತರ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಈ ಅಂಶಗಳನ್ನು ಪರಿಗಣಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ**

**ಸಂಖ್ಯೆ: ಡಿಆರ್:ಡಿವಿಜಿ/ಸಮಾಪನೆ/ ಸಿಆರ್-21/2006-07, ದಿನಾಂಕ:16ನೇ ಡಿಸೆಂಬರ್, 2008**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಗಣಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75ರ ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್ಎಂ:2001, ದಿನಾಂಕ:21.11.2001ರ ಪ್ರಕಾರ ದತ್ತವಾದ ಅಧಿಕಾರದನ್ವಯ ದಾವಣಗೆರೆ ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರು, ಬಿ. ಕುಬೇರಪ್ಪ, ಕೆ.ಸಿ.ಎಸ್. ಆದ ನಾನು ಸಮಾಪನೆಗೊಂಡ ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘ ನಿ., ಆಲೂರು, ದಾವಣಗೆರೆ-ತಾ: ಇದರ ನೋಂದಣಿಯನ್ನು ರದ್ದುಗೊಳಿಸಿ ಆದೇಶ ಹೊರಡಿಸಿರುತ್ತೇನೆ.

ಈ ರದ್ಧತಿಯ ಆದೇಶದ ದಿನಾಂಕದಿಂದ ಸದರಿ ಸಹಕಾರ ಸಂಘದ ಕಾರ್ಯ ಚಟುವಟಿಕೆಗಳು ನಿಂತು ಹೋಗಿರುತ್ತವೆಂದು ಭಾವಿಸಲ್ಪಡತಕ್ಕದ್ದು. ಈ ಸಂಘವು ಅಸ್ತಿತ್ವದಲ್ಲಿರುವುದಿಲ್ಲವೆಂದು ಪರಿಗಣಿಸತಕ್ಕದ್ದು ಹಾಗೂ ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960ರ ನಿಯಮ 33(ಎನ್) ರನ್ವಯ ಈ ಸಂಘದ ದಾಖಲಾತಿಗಳನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರ ಕಛೇರಿಯಲ್ಲಿಡಲು ಆದೇಶಿಸಿದೆ.

ನನ್ನ ಸ್ವಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನ ದಿನಾಂಕ:16.12.2008 ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪನಿಬಂಧಕರು,
ದಾವಣಗೆರೆ ಜಿಲ್ಲೆ, ದಾವಣಗೆರೆ.

ಪಿ.ಆರ್.34

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪ ನಿಬಂಧಕರವರು, ದಾವಣಗೆರೆಜಿಲ್ಲೆ, ದಾವಣಗೆರೆ ಇವರ ಕಛೇರಿಯ ನಡವಳಿಗಳು**

**ವಿಷಯ:** ಸಮಾಪನೆಗೊಂಡಿರುವ ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘ ನಿ., ಆನಗೋಡು, ದಾವಣಗೆರೆ-ತಾ: ಇದರ ನೋಂದಣಿಯನ್ನು ರದ್ದುಪಡಿಸುವ ಕುರಿತು.

**ಉಲ್ಲೇಖ:**1) ಈ ಕಛೇರಿ ಆದೇಶ ಸಂಖ್ಯೆ: ಡಿಆರ್/ಡಿವಿಜಿ/ಸಮಾಪನೆ/ಸಿಆರ್-16/2006-07, ದಿನಾಂಕ:23.08.2006.
2) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರ ಪತ್ರ ದಿನಾಂಕ:29.11.2008.

**ಪ್ರಸ್ತಾವನೆ:**

ಮೇಲ್ಕಂಡ ವಿಷಯ ಮತ್ತು ಉಲ್ಲೇಖಗಳಿಗೆ ಸಂಬಂಧಿಸಿದಂತೆ, ಈ ಮೇಲ್ಕಂಡ ಸಹಕಾರ ಸಂಘವು ನೋಂದಣಿ ಸಂಖ್ಯೆ: ಎಆರ್-31/ಆರ್‌ಜಿಎನ್/27107/ ದಿನಾಂಕ:08.08.2000 ರಲ್ಲಿ ನೋಂದಣಿಯಾಗಿರುತ್ತದೆ. ಸಂಘದ ಕಾರ್ಯಚಟುವಟಿಕೆಗಳು ಪೂರ್ಣವಾಗಿ ಸ್ಥಗಿತಗೊಂಡಿದ್ದರಿಂದ, ಈ ಸಂಘವನ್ನು ಮುಂದುವರಿಸಿಕೊಂಡು ಹೋಗುವುದು ಸೂಕ್ತವಲ್ಲವೆಂದು ಭಾವಿಸಿ, ಉಲ್ಲೇಖ (1)ರ ದಿನಾಂಕ:23.08.2006ರ ಆದೇಶದಲ್ಲಿ ಸಮಾಪನೆಗೊಳಿಸಿ ಸಹಕಾರ ಸಂಘಗಳ ನಿರೀಕ್ಷಕರು, ಸಹಾಯಕ ನಿಬಂಧಕರ ಕಛೇರಿ, ದಾವಣಗೆರೆ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು. ಸಮಾಪನಾಧಿಕಾರಿಗಳು ಸಂಘದ ಆಸ್ತಿ ಮತ್ತು ಜವಾಬ್ದಾರಿಗಳನ್ನು ವಿಲೇಮಾಡಿ ಶೂನ್ಯಗೊಳಿಸಿ ಸಂಘದ ನೋಂದಣಿಯನ್ನು ರದ್ದುಗೊಳಿಸಲು ಉಲ್ಲೇಖ (2)ರ ರೀತ್ಯ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರ ಮುಖಾಂತರ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಈ ಅಂಶಗಳನ್ನು ಪರಿಗಣಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ**

**ಸಂಖ್ಯೆ: ಡಿಆರ್:ಡಿವಿಜಿ/ಸಮಾಪನೆ/ ಸಿಆರ್-16/2006-07, ದಿನಾಂಕ:16ನೇ ಡಿಸೆಂಬರ್, 2008**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಗಣಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75ರ ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್ಎಂ:2001, ದಿನಾಂಕ:21.11.2001ರ ಪ್ರಕಾರ ದತ್ತವಾದ ಅಧಿಕಾರದನ್ವಯ ದಾವಣಗೆರೆ ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರು, ಬಿ. ಕುಬೇರಪ್ಪ, ಕೆ.ಸಿ.ಎಸ್. ಆದ ನಾನು ಸಮಾಪನೆಗೊಂಡ ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘ ನಿ., ಆನಗೋಡು, ದಾವಣಗೆರೆ-ತಾ: ಇದರ ನೋಂದಣಿಯನ್ನು ರದ್ದುಗೊಳಿಸಿ ಆದೇಶ ಹೊರಡಿಸಿರುತ್ತೇನೆ.

ಈ ರದ್ಧತಿಯ ಆದೇಶದ ದಿನಾಂಕದಿಂದ ಸದರಿ ಸಹಕಾರ ಸಂಘದ ಕಾರ್ಯ ಚಟುವಟಿಕೆಗಳು ನಿಂತು ಹೋಗಿರುತ್ತವೆಂದು ಭಾವಿಸಲ್ಪಡತಕ್ಕದ್ದು. ಈ ಸಂಘವು ಅಸ್ತಿತ್ವದಲ್ಲಿರುವುದಿಲ್ಲವೆಂದು ಪರಿಗಣಿಸತಕ್ಕದ್ದು ಹಾಗೂ ಕರ್ನಾಟಕ

ಸಹಕಾರ ಸಂಘಗಳ ನಿಯಮಗಳು 1960ರ ನಿಯಮ 33(ಎನ್) ರನ್ವಯ ಈ ಸಂಘದ ದಾಖಲಾತಿಗಳನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರ ಕಛೇರಿಯಲ್ಲಿಡಲು ಆದೇಶಿಸಿದೆ.

ನನ್ನ ಸ್ವಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನ ದಿನಾಂಕ:16.12.2008 ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪನಿಬಂಧಕರು,
ದಾವಣಗೆರೆ ಜಿಲ್ಲೆ, ದಾವಣಗೆರೆ.

ಪಿ.ಆರ್.35

## ಸಹಕಾರ ಇಲಾಖೆ

### ಸಹಕಾರ ಸಂಘಗಳ ಉಪ ನಿಬಂಧಕರವರು, ದಾವಣಗೆರೆಜಿಲ್ಲೆ, ದಾವಣಗೆರೆ ಇವರ ಕಛೇರಿಯ ನಡವಳಿಗಳು

**ವಿಷಯ:** ಸಮಾಪನೆಗೊಂಡಿರುವ ಶ್ರೀ ಭಗವಾನ್ ಮಹಾವೀರ ವಿವಿಧೋದ್ದೇಶ ಸಹಕಾರ ಸಂಘ ನಿ., ದಾವಣಗೆರೆ ಇದರ ನೋಂದಣಿಯನ್ನು ರದ್ದುಪಡಿಸುವ ಕುರಿತು.

**ಉಲ್ಲೇಖ:**1) ಈ ಕಛೇರಿ ಆದೇಶ ಸಂಖ್ಯೆ: ಡಿಆರ್/ಡಿವಿಜಿ/ಸಮಾಪನೆ/ಸಿಆರ್–08/2007–08, ದಿನಾಂಕ:12.12.2007.
2) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರ ಪತ್ರ ದಿನಾಂಕ:27.12.2008.

**ಪ್ರಸ್ತಾವನೆ:**

ಮೇಲ್ಕಂಡ ವಿಷಯ ಮತ್ತು ಉಲ್ಲೇಖಗಳಿಗೆ ಸಂಬಂಧಿಸಿದಂತೆ, ಈ ಮೇಲ್ಕಂಡ ಸಹಕಾರ ಸಂಘವು ನೋಂದಣಿ ಸಂಖ್ಯೆ: ಎಆರ್–31/ಆರ್‌ಜಿಎನ್/29169/2003–04 ದಿನಾಂಕ:30.06.2003ರಲ್ಲಿ ನೋಂದಣಿಯಾಗಿರುತ್ತದೆ. ಸಂಘದ ಕಾರ್ಯಚಟುವಟಿಕೆಗಳು ಪೂರ್ಣವಾಗಿ ಸ್ಥಗಿತಗೊಂಡಿದ್ದರಿಂದ, ಈ ಸಂಘವನ್ನು ಮುಂದುವರಿಸಿಕೊಂಡು ಹೋಗುವುದು ಸೂಕ್ತವಲ್ಲವೆಂದು ಭಾವಿಸಿ, ಉಲ್ಲೇಖ (1)ರ ದಿನಾಂಕ:12.12.2007ರ ಆದೇಶದಲ್ಲಿ ಸಮಾಪನೆಗೊಳಿಸಿ ಸಹಕಾರ ಸಂಘಗಳ ನಿರೀಕ್ಷಕರು, 1ನೇ ವೃತ್ತ, ಸಹಾಯಕ ನಿಬಂಧಕರ ಕಛೇರಿ, ದಾವಣಗೆರೆ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು. ಸಮಾಪನಾಧಿಕಾರಿಗಳು ಸಂಘದ ಆಸ್ತಿ ಮತ್ತು ಜವಾಬ್ದಾರಿಗಳನ್ನು ವಿಲೇಮಾಡಿ ಶೂನ್ಯಗೊಳಿಸಿ ಸಂಘದ ನೋಂದಣಿಯನ್ನು ರದ್ದುಗೊಳಿಸಲು ಉಲ್ಲೇಖ (2)ರ ರೀತ್ಯಾ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರ ಮುಖಾಂತರ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಈ ಅಂಶಗಳನ್ನು ಪರಿಗಣಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

### ಆದೇಶ

**ಸಂಖ್ಯೆ: ಡಿಆರ್:ಡಿವಿಜಿ: ಸಮಾಪನೆ/ಸಿಆರ್–08/2007–08, ದಿನಾಂಕ:27ನೇ ಡಿಸೆಂಬರ್, 2008**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಗಣಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್‌ಎಂ:2001 ದಿನಾಂಕ:21.11.2001ರ ಪ್ರಕಾರ ದತ್ತವಾದ ಅಧಿಕಾರದನ್ವಯ ದಾವಣಗೆರೆ ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರು, ಬಿ. ಕುಬೇರಪ್ಪ ಕೆ.ಸಿ.ಎಸ್. ಆದ ನಾನು ಸಮಾಪನೆಗೊಂಡ ಶ್ರೀ ಭಗವಾನ್ ಮಹಾವೀರ ವಿವಿಧೋದ್ದೇಶ ಸಹಕಾರ ಸಂಘ ನಿ., ದಾವಣಗೆರೆ, ಇದರ ನೋಂದಣಿಯನ್ನು ರದ್ದುಗೊಳಿಸಿ ಆದೇಶ ಹೊರಡಿಸಿರುತ್ತೇನೆ.

ಈ ರದ್ಧತಿಯ ಆದೇಶದ ದಿನಾಂಕದಿಂದ ಸದರಿ ಸಹಕಾರ ಸಂಘದ ಕಾರ್ಯ ಚಟುವಟಿಕೆಗಳು ನಿಂತು ಹೋಗಿರುತ್ತವೆಂದು ಭಾವಿಸಲ್ಪಡತಕ್ಕದ್ದು. ಈ ಸಂಘವು ಅಸ್ತಿತ್ವದಲ್ಲಿರುವುದಿಲ್ಲವೆಂದು ಪರಿಗಣಿಸತಕ್ಕದ್ದು ಹಾಗೂ ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960ರ ನಿಯಮ 33(ಎನ್) ರನ್ವಯ ಈ ಸಂಘದ ದಾಖಲಾತಿಗಳನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ, ಇವರ ಕಛೇರಿಯಲ್ಲಿಡಲು ಆದೇಶಿಸಿದೆ.

ನನ್ನ ಸ್ವಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನ ದಿನಾಂಕ:27.12.2008 ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪನಿಬಂಧಕರು,
ದಾವಣಗೆರೆ ಜಿಲ್ಲೆ, ದಾವಣಗೆರೆ.

ಪಿ.ಆರ್.38

## ಸಹಕಾರ ಇಲಾಖೆ

### ಸಹಕಾರ ಸಂಘಗಳ ಉಪ ನಿಬಂಧಕರವರು, ದಾವಣಗೆರೆಜಿಲ್ಲೆ, ದಾವಣಗೆರೆ ಇವರ ಕಛೇರಿಯ ನಡವಳಿಗಳು

**ವಿಷಯ:** ಸಮಾಪನೆಗೊಂಡಿರುವ ಗುತಿದುರ್ಗ ಹಾಲು ಉತ್ಪಾದಕರ ಮಹಿಳಾ ಸಹಕಾರ ಸಂಘ ನಿ., ಜಗಳೂರು–ತಾ:ಇದರ ನೋಂದಣಿಯನ್ನು ರದ್ದುಪಡಿಸುವ ಕುರಿತು.

**ಉಲ್ಲೇಖ:**1) ಈ ಕಛೇರಿ ಆದೇಶ ಸಂಖ್ಯೆ: ಡಿಆರ್/ಡಿವಿಜಿ/ಸಮಾಪನೆ/ಸಿಆರ್–10/2008–09, ದಿನಾಂಕ:04.06.2008.
2) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಹರಪನಹಳ್ಳಿ, ಇವರ ಪತ್ರ ದಿನಾಂಕ:15.12.2008.

**ಪ್ರಸ್ತಾವನೆ:**

ಮೇಲ್ಕಂಡ ವಿಷಯ ಮತ್ತು ಉಲ್ಲೇಖಗಳಿಗೆ ಸಂಬಂಧಿಸಿದಂತೆ, ಈ ಮೇಲ್ಕಂಡ ಸಹಕಾರ ಸಂಘವು ನೋಂದಣಿ ಸಂಖ್ಯೆ: ಸನಿ/ ಹೆಚ್‌ಆರ್‌ಪಿ/ಆರ್‌ಎಸ್‌ಆರ್/33534/2005–06 ದಿನಾಂಕ:15.07.2005ರಲ್ಲಿ ನೋಂದಣಿಯಾಗಿರುತ್ತದೆ. ಸಂಘದ ಕಾರ್ಯಚಟುವಟಿಕೆಗಳು ಪೂರ್ಣವಾಗಿ ಸ್ಥಗಿತಗೊಂಡಿದ್ದರಿಂದ, ಈ ಸಂಘವನ್ನು ಮುಂದುವರಿಸಿಕೊಂಡು ಹೋಗುವುದು ಸೂಕ್ತವಲ್ಲವೆಂದು ಭಾವಿಸಿ ಉಲ್ಲೇಖ (1)ರ ದಿನಾಂಕ:04.06.2008ರ ಆದೇಶದಲ್ಲಿ ಸಮಾಪನೆಗೊಳಿಸಿ ಸಹಕಾರ ಅಭಿವೃದ್ಧಿ ಅಧಿಕಾರಿಗಳು, ಜಗಳೂರು, ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು. ಸಮಾಪನಾಧಿಕಾರಿಗಳು ಸಂಘದ ಆಸ್ತಿ ಮತ್ತು ಜವಾಬ್ದಾರಿಗಳನ್ನು ವಿಲೇಮಾಡಿ ಶೂನ್ಯಗೊಳಿಸಿ ಸಂಘದ ನೋಂದಣಿಯನ್ನು ರದ್ದುಗೊಳಿಸಲು ಉಲ್ಲೇಖ (2)ರ ರೀತ್ಯಾ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಹರಪನಹಳ್ಳಿ ಇವರ ಮುಖಾಂತರ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಈ ಅಂಶಗಳನ್ನು ಪರಿಗಣಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ**

**ಸಂಖ್ಯೆ: ಡಿಆರ್:ಡಿವಿಜಿ: ಸಮಾಪನೆ/ಸಿಆರ್–10/2007–08, ದಿನಾಂಕ:27ನೇ ಡಿಸೆಂಬರ್, 2008**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಗಣಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್‌ಎಂ:2001 ದಿನಾಂಕ:21.11.2001ರ ಪ್ರಕಾರ ದತ್ತವಾದ ಅಧಿಕಾರದನ್ವಯ ದಾವಣಗೆರೆ ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರು, ಬಿ. ಕುಬೇರಪ್ಪ ಕೆ.ಸಿ.ಎಸ್. ಆದ ನಾನು ಸಮಾಪನೆಗೊಂಡ ಗುತ್ತಿದುರ್ಗ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಜಗಳೂರು–ತಾ: ಇದರ ನೋಂದಣಿಯನ್ನು ರದ್ದುಗೊಳಿಸಿ ಆದೇಶ ಹೊರಡಿಸಿರುತ್ತೇನೆ.

ಈ ರದ್ಧತಿಯ ಆದೇಶದ ದಿನಾಂಕದಿಂದ ಸದರಿ ಸಹಕಾರ ಸಂಘದ ಕಾರ್ಯ ಚಟುವಟಿಕೆಗಳು ನಿಂತು ಹೋಗಿರುತ್ತವೆಂದು ಭಾವಿಸಲ್ಪಡತಕ್ಕದ್ದು. ಈ ಸಂಘವು ಅಸ್ತಿತ್ವದಲ್ಲಿರುವುದಿಲ್ಲವೆಂದು ಪರಿಗಣಿಸತಕ್ಕದ್ದು ಹಾಗೂ ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960ರ ನಿಯಮ 33(ಎನ್) ರನ್ವಯ ಈ ಸಂಘದ ದಾಖಲಾತಿಗಳನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಹರಪನಹಳ್ಳಿ, ಇವರ ಕಛೇರಿಯಲ್ಲಿಡಲು ಆದೇಶಿಸಿದೆ.

ನನ್ನ ಸ್ವಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನ ದಿನಾಂಕ:27.12.2008 ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪನಿಬಂಧಕರು,
ದಾವಣಗೆರೆ ಜಿಲ್ಲೆ, ದಾವಣಗೆರೆ.

ಪಿ.ಆರ್.39

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪ ನಿಬಂಧಕರವರು, ದಾವಣಗೆರೆ ಜಿಲ್ಲೆ, ದಾವಣಗೆರೆ ಇವರ ಕಛೇರಿಯ ನಡವಳಿಗಳು**

**ವಿಷಯ:** ಸಮಾಪನೆಗೊಂಡಿರುವ ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘ ನಿ., ಕೊಡಗನೂರು, ದಾವಣಗೆರೆ–ತಾ: ಇದರ ನೋಂದಣಿಯನ್ನು ರದ್ದುಪಡಿಸುವ ಕುರಿತು.

**ಉಲ್ಲೇಖ:**1) ಈ ಕಛೇರಿ ಆದೇಶ ಸಂಖ್ಯೆ: ಡಿಆರ್/ಡಿವಿಜಿ/ಸಮಾಪನೆ/ಸಿಆರ್–15/2006–07, ದಿನಾಂಕ:28.08.2006.
2) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರ ಪತ್ರ ದಿನಾಂಕ:27.12.2008.

**ಪ್ರಸ್ತಾವನೆ:**

ಮೇಲ್ಕಂಡ ವಿಷಯ ಮತ್ತು ಉಲ್ಲೇಖಗಳಿಗೆ ಸಂಬಂಧಿಸಿದಂತೆ, ಈ ಮೇಲ್ಕಂಡ ಸಹಕಾರ ಸಂಘವು ನೋಂದಣಿ ಸಂಖ್ಯೆ:ಎಆರ್–31/ಆರ್‌ಜಿಎನ್/29113/ದಿನಾಂಕ:21.03.2001ರಲ್ಲಿ ನೋಂದಣಿಯಾಗಿರುತ್ತದೆ. ಸಂಘದ ಕಾರ್ಯಚಟುವಟಿಕೆಗಳು ಪೂರ್ಣವಾಗಿ ಸ್ಥಗಿತಗೊಂಡಿದ್ದರಿಂದ, ಈ ಸಂಘವನ್ನು ಮುಂದುವರಿಸಿಕೊಂಡು ಹೋಗುವುದು ಸೂಕ್ತವಲ್ಲವೆಂದು ಭಾವಿಸಿ, ಉಲ್ಲೇಖ (1)ರ ದಿನಾಂಕ:28.08.2006ರ ಆದೇಶದಲ್ಲಿ ಸಮಾಪನೆಗೊಳಿಸಿ ಸಹಕಾರ ಸಂಘಗಳ ನಿರೀಕ್ಷಕರು, 2ನೇ ವೃತ್ತ, ಸಹಾಯಕ ನಿಬಂಧಕರ ಕಛೇರಿ, ದಾವಣಗೆರೆ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು. ಸಮಾಪನಾಧಿಕಾರಿಗಳು ಸಂಘದ ಆಸ್ತಿ ಮತ್ತು ಜವಾಬ್ದಾರಿಗಳನ್ನು ವಿಲೇಮಾಡಿ ಶೂನ್ಯಗೊಳಿಸಿ ಸಂಘದ ನೋಂದಣಿಯನ್ನು ರದ್ದುಗೊಳಿಸಲು ಉಲ್ಲೇಖ (2)ರ ರೀತ್ಯ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರ ಮುಖಾಂತರ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಈ ಅಂಶಗಳನ್ನು ಪರಿಗಣಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ**

**ಸಂಖ್ಯೆ: ಡಿಆರ್:ಡಿವಿಜಿ/ಸಮಾಪನೆ/ ಸಿಆರ್–15/2006–07, ದಿನಾಂಕ:27ನೇ ಡಿಸೆಂಬರ್, 2008**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಗಣಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75ರ ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್‌ಎಂ:2001, ದಿನಾಂಕ:21.11.2001ರ ಪ್ರಕಾರ ದತ್ತವಾದ ಅಧಿಕಾರದನ್ವಯ ದಾವಣಗೆರೆ ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರು, ಬಿ. ಕುಬೇರಪ್ಪ, ಕೆ.ಸಿ.ಎಸ್. ಆದ ನಾನು

ಸಮಾಪನೆಗೊಂಡ ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘ ನಿ., ಕೊಡಗನೂರು, ದಾವಣಗೆರೆ–ತಾ: ಇದರ ನೋಂದಣಿಯನ್ನು ರದ್ದುಗೊಳಿಸಿ ಆದೇಶ ಹೊರಡಿಸಿರುತ್ತೇನೆ.

ಈ ರದ್ಧತಿಯ ಆದೇಶದ ದಿನಾಂಕದಿಂದ ಸದರಿ ಸಹಕಾರ ಸಂಘದ ಕಾರ್ಯ ಚಟುವಟಿಕೆಗಳು ನಿಂತು ಹೋಗಿರುತ್ತವೆಂದು ಭಾವಿಸಲ್ಪಡತಕ್ಕದ್ದು. ಈ ಸಂಘವು ಅಸ್ತಿತ್ವದಲ್ಲಿರುವುದಿಲ್ಲವೆಂದು ಪರಿಗಣಿಸತಕ್ಕದ್ದು ಹಾಗೂ ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960ರ ನಿಯಮ 33(ಎನ್) ರನ್ವಯ ಈ ಸಂಘದ ದಾಖಲಾತಿಗಳನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರ ಕಛೇರಿಯಲ್ಲಿಡಲು ಆದೇಶಿಸಿದೆ.

ನನ್ನ ಸ್ವಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನ ದಿನಾಂಕ:27.12.2008 ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪನಿಬಂಧಕರು,
ದಾವಣಗೆರೆ ಜಿಲ್ಲೆ, ದಾವಣಗೆರೆ.

ಪಿ.ಆರ್.40

## ಸಹಕಾರ ಇಲಾಖೆ

### ಸಹಕಾರ ಸಂಘಗಳ ಉಪ ನಿಬಂಧಕರವರು, ದಾವಣಗೆರೆಜಿಲ್ಲೆ, ದಾವಣಗೆರೆ ಇವರ ಕಛೇರಿಯ ನಡವಳಿಗಳು

**ವಿಷಯ:** ಸಮಾಪನೆಗೊಂಡಿರುವ ನವೋದಯ ಕ್ರೆಡಿಟ್ ಕೋ–ಆಪ್ ಸೊಸೈಟಿ ನಿ., ದಾವಣಗೆರೆ ಇದರ ನೋಂದಣಿಯನ್ನು ರದ್ದುಪಡಿಸುವ ಕುರಿತು.

**ಉಲ್ಲೇಖ:**1) ಈ ಕಛೇರಿ ಆದೇಶ ಸಂಖ್ಯೆ: ಡಿಆರ್/ಡಿವಿಜಿ/ಸಮಾಪನೆ/ಸಿಆರ್–30/2005–06, ದಿನಾಂಕ:14.03.2007.
2) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರ ಪತ್ರ ದಿನಾಂಕ:18.12.2008.

**ಪ್ರಸ್ತಾವನೆ:**

ಮೇಲ್ಕಂಡ ವಿಷಯ ಮತ್ತು ಉಲ್ಲೇಖಗಳಿಗೆ ಸಂಬಂಧಿಸಿದಂತೆ, ಈ ಮೇಲ್ಕಂಡ ಸಹಕಾರ ಸಂಘವು ನೋಂದಣಿ ಸಂಖ್ಯೆ:ಎಆರ್–31/ಆರ್ಎಸ್ಆರ್/29107/ 2001–02, ದಿನಾಂಕ:02.09.2002ರಲ್ಲಿ ನೋಂದಣಿಯಾಗಿರುತ್ತದೆ. ಸಂಘದ ಕಾರ್ಯಚಟುವಟಿಕೆಗಳು ಪೂರ್ಣವಾಗಿ ಸ್ಥಗಿತಗೊಂಡಿದ್ದರಿಂದ, ಈ ಸಂಘವನ್ನು ಮುಂದುವರಿಸಿಕೊಂಡು ಹೋಗುವುದು ಸೂಕ್ತವಲ್ಲವೆಂದು ಭಾವಿಸಿ, ಉಲ್ಲೇಖ (1)ರ ದಿನಾಂಕ:14.03.2007ರ ಆದೇಶದಲ್ಲಿ ಸಮಾಪನೆಗೊಳಿಸಿ ಸಹಕಾರ ಸಂಘಗಳ ನಿರೀಕ್ಷಕರು, ವೃತ್ತ–2, ಸಹಾಯಕ ನಿಬಂಧಕರ ಕಛೇರಿ, ದಾವಣಗೆರೆ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು. ಸಮಾಪನಾಧಿಕಾರಿಗಳು ಸಂಘದ ಆಸ್ತಿ ಮತ್ತು ಜವಾಬ್ದಾರಿಗಳನ್ನು ವಿಲೇಮಾಡಿ ಶೂನ್ಯಗೊಳಿಸಿ ಸಂಘದ ನೋಂದಣಿಯನ್ನು ರದ್ದುಗೊಳಿಸಲು ಉಲ್ಲೇಖ (2)ರ ರೀತ್ಯ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರ ಮುಖಾಂತರ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಈ ಅಂಶಗಳನ್ನು ಪರಿಗಣಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ**

**ಸಂಖ್ಯೆ: ಡಿಆರ್:ಡಿವಿಜಿ/ಸಮಾಪನೆ/ ಸಿಆರ್–30/2005–06, ದಿನಾಂಕ:27ನೇ ಡಿಸೆಂಬರ್, 2008**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಗಣಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75ರ ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್ಎಂ:2001, ದಿನಾಂಕ:21.11.2001ರ ಪ್ರಕಾರ ದತ್ತವಾದ ಅಧಿಕಾರದನ್ವಯ ದಾವಣಗೆರೆ ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರು, ಬಿ. ಕುಬೇರಪ್ಪ, ಕೆ.ಸಿ.ಎಸ್. ಆದ ನಾನು ಸಮಾಪನೆಗೊಂಡ ನವೋದಯ ಕ್ರೆಡಿಟ್ ಕೋ–ಆಪ್ ಸೊಸೈಟಿ ನಿ., ದಾವಣಗೆರೆ, ಇದರ ನೋಂದಣಿಯನ್ನು ರದ್ದುಗೊಳಿಸಿ ಆದೇಶ ಹೊರಡಿಸಿರುತ್ತೇನೆ.

ಈ ರದ್ಧತಿಯ ಆದೇಶದ ದಿನಾಂಕದಿಂದ ಸದರಿ ಸಹಕಾರ ಸಂಘದ ಕಾರ್ಯ ಚಟುವಟಿಕೆಗಳು ನಿಂತು ಹೋಗಿರುತ್ತವೆಂದು ಭಾವಿಸಲ್ಪಡತಕ್ಕದ್ದು. ಈ ಸಂಘವು ಅಸ್ತಿತ್ವದಲ್ಲಿರುವುದಿಲ್ಲವೆಂದು ಪರಿಗಣಿಸತಕ್ಕದ್ದು ಹಾಗೂ ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960ರ ನಿಯಮ 33(ಎನ್) ರನ್ವಯ ಈ ಸಂಘದ ದಾಖಲಾತಿಗಳನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರ ಕಛೇರಿಯಲ್ಲಿಡಲು ಆದೇಶಿಸಿದೆ.

ನನ್ನ ಸ್ವಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನ ದಿನಾಂಕ:27.12.2008 ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪನಿಬಂಧಕರು,
ದಾವಣಗೆರೆ ಜಿಲ್ಲೆ, ದಾವಣಗೆರೆ.

ಪಿ.ಆರ್.41